ತಂದು ಜಠರದಲ್ಲಿ ಜನುಮ ಉಣಿಸಿ ಉಡಿಸಿ ಬೆಳೆಸೀ ।
ಛಂದದಿಂದಲಿ ಪೊರೆವೆಯಿನ್ನು ಬೇಡಿದನು ಸಲಿಸಿ ೨

ಮರೆಯಲಿಕ್ಕೆ ದೇಶಗ್ರಾಮ ವೃತ್ತಿಗೃಹಗಳಲ್ಲಾ ।
ಎರಡು ದಿನದ ಕಾಯ ಸುಖದ ದ್ರವ್ಯ ಧನವಲ್ಲಾ ೩

ಮರಹು ಮರಸಿ ಅರವ್ಹಿಲಿರಿಸಿ ಇರಹು ಘನವನರಸಿ ।
ಗುರು ಮಹಿಪತಿ ಸ್ವಾಮಿ ಕಾಯಿದೇ ಕಂದನುದ್ಧರಿಸಿ ೪

## ೪೪೯

ಎಂದಿಗೆ ಕಾಂಬೆನೇ । ಸಖಿಯೇ ।
ಪಾವನ ಸುಂದರ ಶ್ರೀ ಗುರು ಚರಣಾ ಪ

ಸ್ಮರಿಸಲು ನಾಮವಾ । ಮರ್ಥವಿನಾ ।
ಮರೆಸಿ ಅರಹು ದೋರುವನಾ ೧

ಆಗಲು ದರುಶನ । ಮನಸಿನಾ ।
ಕೈಗೊಡುವದು ವಾಸನಾ ೨

ಭವತಾಪಕಶಮನಾ । ದಾವನಾ ।
ವಿವೇಕಾಮೃತ ವಚನಾ ೩

ಜಗವ್ಯಾಪಕ ಕೀರ್ತಿ । ದೇವನಾ ।
ಬಗೆಯನು ಹೇಳಲಿನ್ನೇನಾ ೪

ಗುರುಮಹಿಪತಿ ಸ್ವಾಮಿ । ನಂದನಾ ।
ಹೊರವ ಬಂದನು ಕರುಣಾ ೫

## ೪೫೦

ಏನ ಹೇಳಲಿ ಮಾತವಾ । ಕೌತುಕದ ।
ನಾನೊಂದು ಕನಸು ಕಂಡೆ ಕೇಳಕ್ಕಾ ಪ

ಪರದರಹು ಮಾಟವಾಗಿ । ಗುರುವೆನಿಸಿ ।
ನರರಂತೆ ಬಂದ ನಲ್ಲೆ ಕೇಳಕ್ಕಾ ।
ಶರಣ ಜನ ನೆರವಿಯೊಳಗ । ತತ್ವವನು ।
ಪರಿಪರಿಲಿ ಬೋಧಿಸಿದನೇ ಕೇಳಕ್ಕಾ ೧

ಅಯ್ಯ ನಂಘ್ರಿಗೆ ಸಿರಸನು । ನಾ ಚಾಚಿ ।
ಜೀಯ ಸಲಹೆನ್ನಯನಲು ಕೇಳಕ್ಕಾ
ಪ್ರಿಯದಿಂದಭಯನಿತ್ತಾ । ನಾ ನಿನ್ನಾ ।
ಕೈಯ ಬಿಡೆನೆಂದಿಗೆಂದು ಕೇಳಕ್ಕಾ ೨

ತನ್ನ ದಯವಿಂತು ಬೀರಲು । ಮದಗಜವು ।
ಕನ್ನಡಿಯೊಳಡಗಿದಂತೆ ಕೇಳಕ್ಕಾ ।
ಎನ್ನೊಳಗ ನೋಡೆ । ವಿಸ್ಮಯದ ।
ಲಿನ್ನು ಮನ ಬೆರಗಾಯಿತೆ ಕೇಳಕ್ಕಾ ೩

## ೪೫೧

ಏನುತ್ತೀರ್ಣಾಗುವೆನು । ಗುರುವಿಗೆ ಪ

ಜನಿತು ಪನಿತನು ವಿದ್ಯದಾಯಕನು ।
ಉಣಲುಡಲೀವನು ಭಯವ ನಿವಾರಿಪನು ೧

ತನ್ನ ತಾನೊಲಿದಾ ಕರುಣವಗರದಾ ।
ಚಿನುಮಯ ಸುಖದಾ ದಾರಿಯ ದೋರಿಸಿದಾ ೨

ತಂದೆ ಮಹಿಪತಿ ಸ್ವಾನಂದ ಮೂರ್ತಿ
ಕಂದನ ಸಾರ್ಥಿ ಆಗಿಹ ಘನಕೀರ್ತಿ ೩

## ೪೫೨

ಏನು ಪುಣ್ಯವ ಮಾಡಿದೆನೋ ಮುನ್ನೆ ।
ಧನ್ಯಗೈಸಿದ ಗುರು ಮಹೀಪತಿ ತಾನು ಪ

ವಿಜಯಗ್ಹೇಳಿದ ಹರಿ ಗೀತೆಯಲಿ ।
ಸುಜನ ಸಂತರೊಳು ದುರ್ಲಭನೆನಲಿ ೧

ಎನ್ನಯ ಸಿರದಲಿ ಅಭಯಕರವಿಟ್ಟು ।
ಚೆನ್ನಾಗಿ ಹೇಳಿದ ಸುಜ್ಞಾನ ಗುಟ್ಟು ೨

ಕಣ್ಣುದೆರೆಸಿ ಭಕ್ತಿ ಮಾರ್ಗದಲಿ ।
ಸಣ್ಣವನೆಂದು ಚಿದ್ಘನದೋರಿಸಲಿ ೩

ಇನ್ನೊಬ್ಬರಾಶೆ ಏತಕೆ ಎನಗಿನ್ನು ।
ಎನ್ನ ಹಂಬಲಿಸಿದಾಶೆಯ ಕಾಮಧೇನು ೪

ತಂದೆ ತಾಯಿ ಗುರು ಬಂಧು ಬಳಗಾಗಿ ।
ಕಂದಗೊಲಿದ ನಿಂದು ತನ್ನಯ ಹೊಣೆಯಾಗಿ ೫

## ೪೫೩

ಏನು ಹೇಳಲಿ ಕೌತುಕವಾ । ಮಹಾ ।
ದಾನಿ ಸದ್ಗುರು ಕೊಟ್ಟಾ ಸ್ವಾನಂದ ಸುಖವಾ ಪ

ಧರೆಯೊಳು ತನ್ನ ತಾಮರದಾ । ಪಾಮರನ ।
ಕರದು ಘನದಯ ಮಳೆಗರದಾ ।
ಸಿರದಿ ನೀಡಿದಾಭಯಕರದಾ । ಬೀಜಾ ।
ಕ್ಷರವ ನುಡಿದು ಯನ್ನ ಕಿವಿಯೊಳುಸುರಿದಾ ೧

ನಯುವಾದ ಭಕುತಿಯ ಒಲಿಸೀ । ಯನ್ನ ।
ನಯನ ವೆರಡರಲಿ ಮುದ್ರಿಯನಿಲಿಸಿ ।
ಲಯಲಕ್ಷಿಯ ನೆಲೆಗೊಳಿಸಿ । ಚಿನು ।
ಮಯ ಪ್ರಭೆ ಕುರುಹನು ದೋರಿದ ಸುಳಿಸಿ ೨

ನಾನಾ ಕಲ್ಪನೆಗಳು ಮರೆಸಿ । ನೆರೆ ।
ಆನಿಗೆ ಮಾಂತ ಬೋಧ ವೆಚ್ಚರಿಸಿ ।
ಶ್ರೀನಾಥ ನೆನುವಿನೊಳಿರಿಸಿ । ಹೊರೆ ।
ದನು ಗುರು ಮಹಿಪತಿ ಕಂದನುದ್ಧರಿಸಿ ೩

## ೪೫೪

ಏನೆಂದು ಬಣ್ಣಿಸಲಿ ಗುರುರಾಯನಾ ।
ತಾ ನೆನೆದವರ ಧನ್ಯಗೈಸುವನಾ ಮಹಿಮೆ ಪ

ಧರಿಯೊಳಜ್ಞಾನ ತಮಹರಣ ಭಾಸ್ಕರ ನೆನಿಪ ।
ವರ ಮುನಿಯ ಕರ ಕಮಲದಲಿ ಜನಿಸೀ ।
ವರಮೂಲ ಮಂತ್ರವನೆ ಗುರು ಮಹಿಪತಿಯಂಬಾ ।
ನಿರುತ ಖ್ಯಾತಿಯ ನಾಮ ಧರಿಸಿ ಬಂದನ ಮಹಿಮೆ ೧

ಆಧ್ಯಾತ್ಮ ಘನಸಾರ ವಿದ್ಯದಾಕಾರವೋ ।
ಶುದ್ಧಜ್ಞಾನ ಕಲ್ಪ ದ್ರುಮವಿನಾ ।
ಮುದ್ದು ಫಲವೋಯನಲು ಸಿದ್ಧ ಸಾಧಕರ ನಡು ।
ಗದ್ದುಗೆಯೊಳೆಸೆವ ಗುಣ ನದ್ವೀತಿಯನ ಮಹಿಮೆ ೨

ಸ್ವಸ್ಥ ಮನದಿಂದ ಭಕುತಿ ಸ್ತವನ ಮಾಡಲಿಕೆ ।
ಮಸ್ತಕದ ಮ್ಯಾಲಭಯ ಹಸ್ತನೀಡೀ ।
ಅಸ್ತಿ ಭಾತಿ ಪ್ರಿಯಂ ವಸ್ತು ವಿದೇಶ ಸಕಲ ಹೃದ ।
ಯಸ್ಥನೆಂದನು ಭವವ ವಿಸ್ತರಿಸುವನ ಮಹಿಮೆ ೩

ಆರಿಗಳವಡದಿಹ ನೈರಾಸ್ಯ ವೃತ್ತಿಯಾ ।
ತಾರದಲಿ ನಡೆದು ಮುನಿ ವೈರಾಗ್ಯದಾ ।
ಸೇರಿ ಸಿರಿ ಸಂಪದವ ತೋರಿದನು ನೋಡಲಿಕೆ ।
ಸಾರ ಸಾಂಖ್ಯವು ಯೋಗ ದಾರಿ ಬಲ್ಲನ ಮಹಿಮೆ ೪

ಹೊಂದಿದ್ದವರ ಚಿದಾನಂದ ಸುಖಸಾಗರದಿ ।
ನಿಂದು ಲೋಲ್ಯಾಡಿಸಿದ ನಂದಿಗಿಂದು ।
ತಂದೆ ಮಹಿಪತಿ ತನ್ನ ದ್ವಂದ್ವಪಾದುಕೆಗಳನು ।
ನಂದನ ಸಿರದಲ್ಲಿಟ್ಟು ಛಂದ ನೋಡುವನ ಮಹಿಮೆ ೫

## ೪೫೫

ಓಂ ನಮೋ ಮಹೀಪತಿ ಸದಾನಂದ ಗುರುಮೂರ್ತಿ ।
ಸನ್ನುತ ನಿಮ್ಮ ಖ್ಯಾತಿ ಪೊಗಳಲಾಪೆನೆ ಕೀರ್ತಿ ಪ

ತನ್ನ ತಾ ಮರೆದವರಾ । ನೀನು ಕೊಟ್ಟು ಎಚ್ಚರಾ ।
ಮುನ್ನಿ ನಂದದಿ ಮಾಡಿ । ಓಡಿಸಿದೇ ಭವದೂರಾ ೧

ಸಹಜ ಬೀರುವ ವಚನಾ । ಅದೇ ಉಪದೇಶ ಜ್ಞಾನಾ।
ಇಹ ಪರಕ ನಿಧಾನಾ । ಮಾಡುವದು ಸಾವಧಾನಾ ೨

ವೇದ ಸಿದ್ಧಾಂತದಲ್ಲಿ । ರಾಜಯೋಗ ಮನೆಯಲ್ಲಿ ।
ಬೋಧಿಸುವ ವಸ್ತು ನೀನೇ । ಸರಿಗಾಣೆ ನಾನೆಲ್ಲಿ ೩

ಏನು ಪುಣ್ಯವೋ ಎನ್ನಾ । ಅದೇ ಬಾಲಕ ನಿನ್ನಾ ।
ತಾನೇನ ಸಾಧುವೆನಗ । ಇರಲು ನಿಮ್ಮ ದಯಾಘನಾ ೪

ದಾಸರಾ ದಾಸನೆಂದು । ಇನ್ನು ನೋಡದವೆ ಕುಂದು ।
ಭಾಸಿ ಪಾಲಿಸು ಕೃಷ್ಣಗ ಎಂದೂ । ಕೈಯ್ಯಾ ಬಿಡೆನೆಂದು ೫



## ೪೫೬

ಕರುಣಿಸೆನಗ ವರ ಯತಿಯೇ ।
ಪರಮ ಪಾವನ ಮೂರುತಿಯೇ ।
ವರ ಭಕುತರ ಸ್ಫೂರುತಿಯೇ ।
ಶರಣ ರಕ್ಷಕ ಮಹೀಪತಿಯೇ ಪ

ಸರ್ವಾಗಮ ಸನ್ಮತಾ ದೋರ್ವದು ನಿನ್ನ ಚರಿತಾ ।
ಉರ್ವಿಯೊಳಗೆ ಸುಖದಾತಾ । ಮೂರ್ವೀ ಜಗವಂದಿತಾ ।
ಸರ್ವಗುಣ ನಿಧಿಯೇ ನೀ । ಸರ್ವರೊಳು ವ್ಯಾಪ್ತನಾಗಿ ।
ಸರ್ವರ ಕೈಯಲಿ ಪೂಜೆ । ಸರ್ವ ಕಾಲ ಕೊಂಬೆ ೧

ಕಾಮನೆ ಪೂರೈಸುವಾ । ಕಾಮಧೇನುವೆ ಜಗಜೀವಾ ।
ನೇಮಿಸಿದಾ ಫಲನೀವಾ । ಆ ಮಹಾ ಸುರತರು ದೇವಾ ।
ಸ್ವಾಮಿ ನೀ ಗತಿಯೆಂದು । ನಿಮ್ಮೊರೆ ಹೊಕ್ಕರೆ ।
ಪ್ರೇಮದಿ ಸಲಹುವೆ । ಈ ಮನುಜರನು ೨

ನಿನ್ನ ಮಹಿಮೆ ತಿಳಿಯಲು । ಎನ್ನಳವೇ ಧರಿಯೊಳು ।
ಚಿನ್ನ ಕೃಷ್ಣೊಡಿಯಾ ದಯಾಳು ।
ಉನ್ನತೋನ್ನತ ಕೃಪಾಳು । ಮುನ್ನ ಮಾಡಿದ ಘನ್ನಪರಾಧವ ।
ಇನ್ನು ಕ್ಷಮಿಸಿ ನೀ । ಚನ್ನಾಗಿ ಕಾಯೋ ೩

## ೪೫೭

ಕಂಡೆನಮ್ಮಾ ಕೌತುಕದಾ ಗಾರುಡಿಗನಾ ।
ಕೊಂಡಾಡಲಳವಲ್ಲ ಹೇಳಲೇ ನಾ ಪ

ಶುದ್ಧ ಸತ್ವದಾ ಗಿರಿಶಿಖರದಲಿಹದೊಂದು ।
ಬೋಧದನಾಗರ ನೂದುವನಾ ೧

ಭಕ್ತಿ ಮುಕ್ತಿಯಂಬಾ ಗೆಜ್ಜೆ ಲೊಪ್ಪುತಿಹ ಪದದಿ ।
ಭಕ್ತರುದ್ದೇಶಕ ಬಂದ ಜವದಿ ೨

ಸಕಲ ತೇಜದ ಬಬ್ಬುಳಿಯೋ ರೂಪ ನೆಲಿಯಾ ।
ಪ್ರಕಟ ತಿಳಿಯದು ನಿಜ ಕಳಿಯನಾ ೩

ಅರಿಶಿಕ್ವಾ ಭಕುತರ ಪಕ್ವಾವೆಂಬ ನಾನಾ ।
ಬಿರುದು ಕಟ್ಟಿಹ ಮಹಿಮನಾ ೪

ಕಾಳ ಸರ್ಪದ ನಿಜ ಮುಖ ಬಂಧವನ ಮಾಡಿ ।
ಜಾಳಿಸಿದನು ಭಯ ಈಡ್ಯಾಡಿ ೫

ಹಮ್ಮಿನ ಗಾವ ಗುಂಡ ಗಜದಂತ ಶರಣರಿಗೆ ।
ವಮ್ಮಿಲೆ ಕಲೆಗಳ ದೋರುದೀಗನಾ ೬

ತಂದೆ ಮಹಿಪತಿ ಸುತ ಸ್ವಾಂಮಿ ದುರ್ಲಭದಾ ।
ನಂದವ ತೋರಿದಾ ದಯದಿಂದಾ ೭

## ೫೨೮

ಗುರು ದಯಾಳು ಮೂರ್ತಿ ಶರಣರ ಸಾರ್ಥಿ ಪ

ಮರಹು ಬಿಡಿಸಿ ತನ್ನ ಅರವಿನೊಳಿಟ್ಟು ।
ಬೀರುವ ನಿಜ ಸ್ಫೂರ್ತಿ ೧

ಗರೆದು ಸದ್ಬೋಧವ ಸುಜ್ಞಾನ ಸ್ಥಿತಿಯಾ
ದೋರುವ ಮನ ಮೂರ್ತಿ ೨

ತ್ವರಿತದಿ ಮಹಿಪತಿ ನಂದನ ಸ್ವಾಮಿ ।
ಪೂರಿಪ । ಮನದಾರ್ತಿ ೩

## ೪೫೯

ಗುರುಮೂರ್ತಿಯ ಚರಣವ ನೋಡಿ । ಮುಡಿ ।
ವೆರಗಿ ವರಗಳ ಬೇಡಿ ಪ

ಜನುಮ ಜನುಮದಿಂದೆಳೆದಘ ಕುಲಗಳ ।
ವನಕ ಸತೇಜ ಕುಠಾರವೆನಿಪ ೧

ತನ್ನ ತಾಮರೆವ ಅವಿದ್ಯದಾ ಕತ್ತಲೆ ।
ಯನ್ನಡಗಿಪ ವಾಸರ ಮಣಿಯನೆ ೨

ನಿರುತದಿ ತನುಮನ ವಚನದಿ ನಂಬಿಹ ।
ಶರಣಜನಾಂಬುಧಿ ಶೀತಕಿರಣಾ ೩

ಶ್ರವಣ ಮನನ ಸುಜ್ಞಾನದ ಬೆಳೆಗಳ ।
ಹವಣದೋರುವ ದಯ ಜಲಧಾರಾ ೪

ತಂದೆ ಮಹಿಪತಿ ನಂದನುದ್ಧರಿಸುತಾ ।
ನಂದದ ಪದವನು ಛಂದದಿತ್ತಿಹ ೫

## ೪೬೦

ಗುರುರಾಯನ ಕರುಣಾ ಪ

ಮರವಿಗೆ ತಾನೇ ಅರವಿಸಿ ಕೊಟ್ಟು ।
ಗರಿಯಿತು ಘನ ಸ್ಫುರಣಾ ೧

ಸಾರುವ ಬೋಧ ಪ್ರತಾಪದಿ ಬಂದು ।
ದೊರೆಯಿತು ಹರಿಚರಣಾ ೨

ನೋಡಲು ಗುರು ಮಹಿಪತಿ ವಲುವಿಂದಾ
ಮಾಡಿತು ಉದ್ಧರಣಾ ೩

## ೪೬೧

ಗುರುರಾಯ ನಂಘ್ರಿಯಾ ಹಿಡಿ ಹಿಡಿ ಹಿಡಿ
ಪರಮ ಸದ್ಭಾವನೆ ಜಡಿ ಜಡಿ ಜಡಿ ಪ

ಎರವಿನಾ ಮನೆಯೊಳು ಸ್ಥಿರವೆಂದು ಮೈಯ್ಯುವ ।
ಮರೆವರೇ ಹರಿನಾಮಾ ನುಡಿ ನುಡಿ ನುಡಿ ೧

ಕರವ ಮುಗಿದು ಬಾಗಿ ತರಣೋಪಾಯವ ನಿನ್ನ ।
ಅರಿತು ಸ್ವಹಿತದಲಿ ನಡಿ ನಡಿ ನಡಿ ೨

ತಂದೆ ಮಹಿಪತಿ ಕಂದಗೆಚ್ಚರಿಸಿದಾ ।
ಬಂದ ಕೈಯ್ಯಲಿ ಗತಿ ಪಡಿ ಪಡಿ ಪಡಿ ೩

## ೪೬೨

ಗುರುರಾಯನಂಥ ಕರುಣಾಳು ಕಾಣೆನು ಜಗದೊಳಗೆ ಪ

ಏನೆಂದರಿಯದ ಪಾಮರ ನಾನು ।
ಜ್ಞಾನ ಭಕುತಿ ವೈರಾಗ್ಯ ರಹಿತನು ।
ತಾನೊಲಿದೀಗೆನ್ನ ನುದ್ಧರಿಸಿದನು ೧

ತನ್ನನುಭವ ನಿಜ ಮಾತಿನ ಗುಟ್ಟು ।
ಎನ್ನೊಳುಸುರಿ ಘನ ತೋರಿಸಿ ಕೊಟ್ಟು ।
ಧನ್ಯನ ಮಾಡಿದಸೇವೆಯಲಿಟ್ಟು ೨

ಮಾಡುವ ಘನ ತುಸು ತಪ್ಪನೆ ಹಿಡಿಯಾ ।
ಬೇಡಿಸಿಕೊಳ್ಳದೆ ನೀಡುತ ಪಡಿಯಾ ।
ರೂಢಿಗಾದನು ಇಹಪರದೊಡೆಯಾ ೩

ತನ್ನವನೆನಿಸಿದ ಮಾತಿಗೆ ಕೂಡಿ ।
ಮನ್ನಣೆಯಿತ್ತನು ಅಭಯವ ನೀಡಿ ।
ಇನ್ನೇನ ಹೇಳಲಿ ಸುಖ ನೋಡಿ ೪

ತಂದೆ ತಾಯಿ ಬಂಧು ಬಳಗೆನಗಾಗಿ ।
ನಿಂದೆ ಸದ್ಗುರು ಮಹೀಪತಿ ಮಹಾಯೋಗಿ ।
ಕಂದನ ಸಲಹುವ ಲೇಸಾಗಿ ೫

## ೪೬೩

ಗುರುರಾಯನಾ ಮನಿಯಾ ನಾಯಿ ನಾನು ಪ

ಗುರು ಗುರು ಎನುತಲಿ ಇರುವೆ ಬಾಗಿಲದೊಳು ।
ಗುರುವಿನೆಂಜಲ ನುಂಡು ಸುಖಿಸುವೆ ನಮ್ಮಯ್ಯನಾ ೧

ಹರಿ ಶರಣರ ಕಂಡು ಗರುವಿಸಿ ಕೆಲಿಯೆನು ।
ದುರುಳರ ಬೆನ್ನಟ್ಟಿ ಹೋಗೆನಾ ನಮ್ಮಯ್ಯನಾ ೨

ಒಡೆಯನ ಮುಂದೆ ಯನ್ನಾ ಒಡಲವ ತೋರುವೆ ।
ಬಿಡದೆ ಅಂಗಣದೊಳು ಹೊರಳುವೆ ನಮ್ಮಯ್ಯ ನಾ ೩

ಹರಿನಾಮದಿಂದ ಭೋಂಕರಿಸಿ ವದರುವೆ ।
ಬರಗುಡೆ ಹಮ್ಮ ಸ್ವಜಾತಿಯ ನಮ್ಮಯ್ಯ ನಾ ೪

ತಂದೆ ಮಹಿಪತಿ ಸ್ವಾಮಿ ಬಂದು ಮೈಯ್ಯಾದಡವಿ ।
ನಿಂದು ತನ್ನ ಬಿರುದಕ ಹಾಕಿದ ನಮ್ಮಯ್ಯನ ೫

## ೪೬೪

ಗುರುರಾಯಾ ನೀ ದಯದಿಂದಲೀ ।
ತಾರಿಸೆನ್ನ ನೀ ಭವದಿಂದಲಿ ಪ

ನಾನಾ ಯೋನಿಯಲಿ ಬಹು ಹೀನ ಜನುಮವನು ।
ನೀ ನೆವೆ ಕಳೆಯಲು ಕರ್ತನು ।
ಧಾನ್ಯಧಾರಣೆ ಮಾಡಿ ಯೋಗ ಸಾಧನ ।
ಏನು ಅರಿಯದ ನಾ ಮೂಢನು ೧

ಸುಜನ ಸಮೂಹವಡಿಗಡಿಗೆ ಪಾಲಿಪೆ ।
ಭಜಕರ ಪ್ರೀಯಾ ಕೃಪಾಬ್ಧಿಯು ।
ರಜತಮ ವಿರಹಿತನಾಗಿ ಸದ್ಭಾವದಿ ।
ನಿಜವರಿಲಿಲ್ಲಾ ಜ್ಞಾನಿಯು ೨

ಧರಣಿಯೊಳಗ ದೀನೋದ್ಧಾರಣ ನೆನುತಲಿ ।
ಮೆರೆಯುತಲಿದೆ ನಿಮ್ಮ ಕೀರ್ತಿ ।
ಗುರುವರ ಮಹಿಪತಿ ಚಿನ್ನನೊಡೆಯನೇ ನೀ
ಕರುಣಿಸೋ ಶರಣರ ಸಾರಥಿ ೩

## ೪೬೫

ಗುರುರಾಯಾ । ಶರಣಾಶ್ರಯಾ । ಪರಮಾ ನಂದೋದಯಾ ।
ಗರಿಯೋ ನಿಮ್ಮ ದಯಾ । ಚರಣಕ ನಂಬಿಹೆನಯ್ಯಾ ।
ತರಳನು ನಾನತಿ ಜೀಯಾ । ಅರಿಯೆನು ಅನ್ಯೋಪಾಯಾ ।
ಧರೆಯೊಳೆನ್ನ ನೀ ಕರದಿ ಪಿಡಿದುದ್ಧರಿಸುದು
ಪಾವನ ಕಾಯಾ ೧

ಅಘಹಾರಿ । ಭಕುತಿಯ ದೋರಿ । ಸುಗಮವ ತೋರಿ ।
ನಿಗಮಾರ್ಥ ಸಾರಿ । ಉಗಮದ ಬೋಧವ ಬೀರಿ ।

ಮಗುವಿಗೆ ಜನನಿಯ ಪರಿ । ಬಗೆವಮ ದೀನೋದ್ಧಾರಿ ।
ಬಗೆ ಬಗೆ ತಪ್ಪುಗಳೆಣಿಸದೆ ಸಲಹುದು
ಭಕುತರ ನಿಜ ಸಹಕಾರಿ ೨

ನಿನ್ನವನಾ । ಮುನ್ನಗಾಯ್ದನಾ । ಎನ್ನೊಳಿಹನ್ಯೂನಾ ।
ಇನ್ನಾರಿಸುದೇನಾ । ಬೆನ್ನವ ಬಿದ್ದಿಹದೀನಾ ।
ಬನ್ನ ಬಡಿಸದನುದಿನಾ । ಚನ್ನಾಗಿ ಕಾಣಿಸಿ ಖೂನಾ ।
ಸನ್ನುತ ಮಹಿಪತಿ ನಂದನ ಜೀವನ ।
ಮನ್ನಿಸು ಹಿಡಿದಭಿಮಾನಾ ೩

## ೪೬೬

ಗುರುರಾಯಾ ದೊಡ್ಡವನ್ಯೆ ಬಲು ಪರೋಪಕಾರಿ ।
ನೆರೆ ನಂಬಿದನಾ ಥರಾ ಕಾವ ಪರೋ ಪರಿ ।
ಪರಗತಿಯ ಸಾಧಕರಾಗುವ ಸಹಕಾರಿ ।
ಗರೆದು ಬೋಧ ಸುಧೆಯ ಉದಾರಿ ।
ನಿರುತದಿ ಭಕ್ತಿ ವಿರಕ್ತಿಯ ಜ್ಞಾನದ ।
ಯುಕ್ತಿಯ ದೋರುವ ದಾರಿ ೧

ಹಲವು ಶಾಸ್ತ್ರದ ಮಾತುಗಳ ಕೇಳಿ ಮುಂಗಾಣದೆ ।
ತೊಳಲುವ ಮನ ಸಂಶಯವಾ ವಂದು ಮಾತಿನಿಂದೆ ।
ಕಳೆದನು ದೃಢ ನೆಲೆಗೊಳಿಸಿ ಸ್ವಾನುಭವದಿಂದೆ ।
ಅಳಿದನು ಭವ ತಮ ಮೂಲದಿಂದಲೇ ।
ಥಳ ಥಳ ಗುಡುವ ಹೊಳೆವ ಚಿದ್ಘನದ ।
ಬೆಳಗವ ದೋರುವ ತಂದೇ ೨

ಮೂಢ ಪಾಮರ ಮಂದಧಿಯನಾನೆಂದರಿಯೆನು ।
ನೋಡಿ ಕರುಣ ಕಟಾಕ್ಷದಲಿ ಮುಂದಕ ಕರೆದನು ।
ನೀಡಿ ಅಭಯ ಹಸ್ತವನು ರೂಢಿಯೊಳು ನಂದನೆನಿಸಿದನು ।
ಆಡುತ ಪಾಡುತ ಸೇವೆಯ ಮಾಡಲು ತಂದೆ
ಮಹಿಪತಿ ತ್ಯಾಜವಿತ್ತನು ೩

## ೪೬೭

ಗುರುವಿನಾ ಬಲಗೊಂಬೆ । ಪರಗತಿ ಪಡಕೊಂಬೆ ।
ಸಿರಿಯಾ । ಧರಿಯಾ । ಧೊರಿಯಾ । ಚರಿಯಾ ।
ಸಾರಿ ಬೀರಿ ತಾರಿಸುವ ಪಾರಾವಾರ ಮಹಿಮನಾ ಪ

ದೃಢ ಭಾವದಿಂದ ಹೋಗಿ ಶುಭ ಚರಣಕೆರಗಿ ।
ಕೆಡ ಗುಣಗಳ ನೀಗಿ । ಇಡುವಾ । ತುಡುವಾ ।
ಮುಡುವಾ । ಕುಡುವಾ ।
ನುಡಿ ನುಡಿಗಳಲ್ಲಿ ಬಿಡದೇ ಅಡಿಗಡಿಗೆ ನೆನೆವುತಾ ೧

ಹರಿಯಲ್ಲರೊಳಗಿರಿಸೀ । ಹಮ್ಮಮತೆಯನೆ ಬಿಡಿಸಿ ।
ಅರಿಮಿತ್ರರಾ ಸಮವಾಗಿರಿಸಿ । ಹರುಷಾ ।
ವರುಷಾ । ದರಸಾ । ಬೆರಸಾ
ದೋರಿ ದೋರಿ ಅರಿವ್ಯೆರಿ ಬೇರೆ ತೋರಿಸಿದನಾ ೨

ಗುರುವರ ಮಹಿಪತಿ ಅನುಭವಾನಂದ ಮೂರ್ತಿ ।
ತರಳ ಕಂದನ ಸಾರ್ಥಿ । ಅರವ್ಹಾ । ಮರವ್ಹಾ ।
ಆರವಾ । ಮುರವಾ ।
ಕುರವ್ಹಾ ಮಾಡಿ ಸ್ಥಿರವಾ ಮಾಡಿ
ಘನದಿರುವ್ಹಾ ಪರವಲಿಟ್ಟನಾ ೩

## ೪೬೮

ಚಿತ್ತ ಸಖಿ ಬಾಗ । ಗುರುವಿಗೇ ಬಾಗ ।
ಉತ್ತಮ ಪರುಷ ನಾರಿಯಲಿಕ್ಕೆ ವಿಷಯದಿಂ ಬಾಗ ೧

ವಿದ್ಯಮದಕ ಬಾಗ ಭಾಗ್ಯಮದಕ ಬಾಗ ।
ಸಧ್ಯರೂಪ ಯೌವ್ವನದ ಕುಲಮದಕ ಬಾಗ ೨

ಭಕುತಿಯಲ್ಲಿ ಜಾರೀ ಪರಿಹೋಗದಿರೇ ಜಾರಿ ।
ನಿಗಟದಿಂದ ಭಜಿಸಲಿಕ್ಕೆ ವಲುವದನು ಜಾರಿ ೩

ಹಿಡಿಯದೇ ಆಲಸಾ ಬಿಟ್ಟು ಕುಡೇ ಕೈಲಾಸಾ ।
ಪಡೆದು ಗುರು ಜ್ಞಾನದಿಂದ ನೋಡೇ ಮುಕ್ತಿ ಕಳಸಾ ೪

ತನ್ನ ತಾನುದ್ಧರಿಸೀ ಭವದಿಂದ ತಾರಿಸೀ ।
ಧನ್ಯಳಾಗ ತಂದೆ ಮಹಿಪತಿ ಪ್ರಭು ಸ್ಮರಿಸೀ ೫

## ೪೬

ಜಯ ಜಯ ಮಹಿಪತಿ ಆನಂದ ಮೂರುತಿ ಗುರುರಾಯಾ ಪ

ಪರಮ ಪುರುಷ ಮಹಾದೀನೋದ್ಧರಣಾ ।
ದುರಿತ ನಿವಾರಣ ಪತಿತ ಪಾವನಾ ।
ಶರಣ ಜನರ ಪಾಲನಾ ಕರುಣಾ ಸಾಗರಾ ೧

ಜಗದೊಳು ಬೋಧ ಶರಾಸನ ಧರಿಸಿ ।
ಅಗಣಿತ ದುಷ್ಟ ಗುಣವ ಮರ್ದಿಸಿದೆ ।
ಭಕುತ ಹೃತ್ಪಂಕಜ ಸಂಚಾರಾ ಆಗಮ ಸನ್ಮತನೇ ೨

ಜನನ ಮರಣ ಅಂಕುರ ಕುಠಾರ ।
ಅನಾಥ ಜನ ಜಾತಕ ಜಲಧರನೇ ।
ಅನುಪಮ ಮಹಿಮಾ ಪಾಲಿಸೋ ಅನುದಿನ ಕೃಷ್ಣನಾ ೩

## ೪೭೦

ಧನ್ಯ ಧನ್ಯವಾಯಿತು ಜನುಮಾ ।
ಆವಪುಣ್ಯವೋ ಅರಿಯೇ ನಮ್ಮಾ ಪ

ನಾನಾ ಜನ್ಮದ ಬಲಿಯನೆ ಗೆದ್ದು ಸಲೆ ।
ಮಾನುಷ ದೇಹದಲಿಂದು ।
ಮಾನುಭಾವರ ವಂಶದಿ ಬಂದು । ಅವರ ।
ಸಾನಿಧ್ಯ ಸೇವೆಯ ಪಡೆದು ೧

ಗುರುಕ್ಷೇತ್ರವೇ ಯನಗಿದೇ ಕಾಶೀ । ಗಂಗೆ ।
ಮೆರೆವುದು ಗುರುತೀರ್ಥವೆನಿಸಿ ।
ಗುರು ವಿಶ್ವೇಶ್ವರ ನೆನೆವಾಸೀ । ಕಂಡು ।
ಪೂರಿತಾಯಿತು ಮನದಾಸಿ ೨

ಛಂದ ದೋರಿಸಿ ಭಕ್ತಿಯವರ್ಮ । ಭವ ।
ಬಂಧಗಳಿಸಿದ ಕರ್ಮ ।
ತಂದೆ ಮಹಿಪತಿ ಶ್ರೀ ಪಾದ ಧರ್ಮಾ । ನಿಜ ।
ನಂದನ ಗಾನಂದೋಬ್ರಹ್ಮಾ ೩

## ೪೭೧

ನಡೀರೇ ನೋಡುವಾ ಗುರುಮೂರ್ತಿಯಾ । ಮಹಿಪತಿಯಾ ।
ತಡೆಯದೇ ಸಖಿಯರು ಪ

ಪೊಡವಿಯೊಳಾನಂದ ಸ್ಥಿತಿಯಾ । ವರ ಯತಿಯಾ ।
ಅಡಿ ಕಮಲವ ಪಿಡಿದು । ಜಡಿದಿಟ್ಟು ಸದ್ಭಾವರತಿಯಾ ।
ಪ್ರೇಮ ಪ್ರೀತಿಯಾ । ದೃಢವಲಿ ಕರ ಮುಗಿದು ೧

ಷೋಡಶ ಪರಿಸೇವೆ ಮಾಡುವಾ । ಪಾಡುವಾ ।
ನೋಡದೆಲೆ ಎಡ ಬಲವಾ ।
ಒಡಿಯನ ಒಡಲ್ಹೊಕ್ಕು ಕೂಡುವಾ ।
ಪಡ ಕೊಂಬಷ್ಟು ಸುಖವಾ ೨

ಶರಣ ಬಂದ ವರಂಗೀಕಾರವಾ ।ಮಾಡಿ ಹೊರವಾ ।
ದೋರಿ ಸನ್ಮಾರ್ಗ ಪೂರ್ಣಾ । ವರನಿಗಮದರ್ಥ ಸಾರವಾ ।
ನೋಡಿ ಬೀರುವಾ । ಕರುಣಿಪ ಕೃಷ್ಣನ ಪ್ರೀಯನಾ ೩

## ೪೭೨

ನಮಗಿನ್ಯಾತರ ಚಿಂತೆಗಳು । ವಿಮಲ ಸದ್ಗುರು
ದಯದೊಲವಿರಲು ಪ

ದ್ಯುಮಣಿಯ ಪ್ರಭೆಯೊಳಗಿದ್ದವಗ ।
ತಮದಳುಕಿನ ಬಳಲಿಕೆ ಯೋಗ
ಸುಮನ ತರುವೇ ನೆಳಲಾದವಗ ।
ಭ್ರಮಿಸುವುದರ ಕಳವಳಹಂಗಾ ೧

ಬೆಮರಿರುವದೇ ಬೆಳದಿಂಗಳಲಿ ।
ಹಿಮ ನಿಲುವುದೇ ಅನಲನಿದಿರಿನಲಿ ।
ಶ್ರಮ ಇಹುದೇ ಚಿಂತಾಮಣೀಯಿರಲು ।
ಕುಮತಿರುವದೆ ಸಜ್ಜನ ನೆರಲಿ ೨

ಕರ್ಪುರ ದೀವಿಗೆ ಬೆರೆದಂತೆ । ಅಪ್ಪುವಿನೊಳು ಲವಣದಂತೆ ।
ಇಪ್ಪ ಪವನ ಪರಿಮಳದಂತೆ । ನಮ್ಮಪ್ಪ
ಮಹಿಪತಿಯನ್ನೊಳಗಿರುತ ೩

## ೪೭೩

ನಮ್ಮಯ್ಯನಾ । ಎಂದು ಕಾಂಬೆ ನಾನು ।
ನಮ್ಮನೋಹರ ಎಂದಿಗಾಹುದಿನ್ನು ಪ

ನಮ್ಮಯ್ಯನ ಯಸಳ ಬೆರಳ ಪಾದಾ ಹೊಳೆವುದು ।
ಬಿಸಜ ಕೋಮಲದಾ ೧

ಮುಗುಳು ನಗೆಯ ನಗುವಾ । ದಾಳಿಂಬ ।
ಬಗೆಯದತಿ ನಲುವಾ ೨

ಕರುಣ ನೋಟ ಚಲುವಾ । ನಾಶಿಕ ।
ಸರಳು ಪುರ್ಬಮಿರುವಾ ೩

ನೊಸಲೊಳು ಮೆರೆವಾ । ಮಾಣಿಕ । ಅಕ್ಷತಿಡುವಾ ೪

ಶ್ರವಣ ಭೂಷಣದಲೀ । ಮುಖಕಳೆ ಠವ ಠವಿಸುತಿರಲಿ ೫

ದಿವ್ಯ ವಸ್ತ್ರ ತೊಡುವಾ । ಪರಿಮಳ ।
ದ್ರವ್ಯ ವಾಸ ನಿಡುವಾ ೬

ಬೆರಳುಂಗುರ ಕೈಯ್ಯಾ । ಬೋಧವ ।
ಗರೆವ ವಾಕ್ಯ ಸುಧೆಯಾ ೭

ಗುರುರೂಪದಿ ಬಂದು । ಜಗವನು ।
ದ್ಧರಿಸಿದ ನಿಂದು ೮

ಹಂಬಲಿಸುವ ಸುತನ । ಹೃದಯದಿ ।
ಬಿಂಬದೋರಿಸಿದನಾ ೯



## ೪೭೪

ನಮ್ಮ ಗುರುರಾಯನೇ ।
ನುತ ಜನಾಶ್ರಯನೇ । ಸಮ್ಯ ಜ್ಞಾನ ಪ್ರಿಯನೆ ।
ಸ್ಮರಿಸಿದಾಗಲಿಹನೇ ಪ

ಮನುಜನಾಗಿ ಬಂದನೇ । ಮರ್ತ್ಯದೊಳು ನಿಂದನೇ ।
ಜನನ ಮರಣ ಸಂದನೇ । ಜರಿಸಿ ಕೊಟ್ಟಾ ನಂದನೇ ೧

ಚಿತ್ತದ ಮೈಲಿಗೆ ಕಳಿಸಿದನೇ । ಚಿದ್ಘನಾಮೃತ ಗರದನೇ ।
ಸತ್ಯ ವಾಕ್ಯಾ ಬಿತ್ತಿದನೇ ಸತ್ವದ ಹೊಲ ಬೆಳಸಿದನೇ ೨

ಮಹಿಪತಿ ನಂದನ ಪ್ರಾಣನೇ । ಮಹಾಪ್ರಜ್ಞಾಪೂರ್ಣನೇ ।
ಇಹಪರ ಕೊಡುವ ತ್ರಾಣನೇ । ಮಹಿಮೆಗೆ ಎಣೆಗಾಣೆನೇ ೩

## ೪೭೫

ನಮ್ಮ ಗುರುರಾಯಾ । ಪೊಡವಿಗೆ ನಡೆ ತಂದನು ಪ

ಪೊಡವಿಗೆ ನಡೆ ತಂದನು।
ಎಡ ಬಲದಲಿ ಭಾಗವತರ ಮೇಳದಿಂದಲಿ ।
ಒಡನೆ ಸುಜ್ಞಾನ ಪರಿ ಪರಿಯಾಟವ ।
ಆಡುತ ಪಾಡುತ ನಲಿದಾಡುತಲಿ ೧

ಧಾರುಣಿಯೊಳು ಭವ ರೋಗಿಗಳೆಲ್ಲರು ।
ತ್ವರಿತದಿ ಬನ್ನಿರೋ ಯನುತಲಿ ಹರಿನಾಮಾ ।
ಭೇರಿಯ ಹೊಯ್ಸುತ ತತ್ವೋಪದೇಶದ ।
ಕರದಲಿ ಔಷಧವನೆ ಹಿಡಕೊಂಡು ೨

ಬಂದವರಿಗೆಲ್ಲ ಬೇಡಿದ್ದು ಕೊಡುತಲಿ ।
ಮಂದ ಮತಿಗಳವಗುಣವನೆ ಬಿಡಿಸುತ ।
ತಂದೆ ಮಹಿಪತಿ ನಂದನ ಸಾರಥಿ ।
ಎಂದೆಂದು ಶರಣರಿಗಾಧಾರಿಯಾಗಿ ೩

## ೪೭೬

ನೆರೆ ಮಾಡುವೆ ನಮ್ಮೈಯ್ಯಾ ಸಾಧುರಾ ಪ

ಝುಮ್ಮನೆ ಹೋಗುವೆ ।
ಸುಮ್ಮನದಿ ಬಾಗುವೆ ।
ಮುಮ್ಮಳಿ ತ್ರಯಗಳ ನೀಗುವೆ ನಮ್ಮೈಯ್ಯಾ ೧

ಬೋಧಾಮೃತನುಂಬೆ ।
ಮಾಧವನಾ ಕಾಂಬೆ ।
ಸಾದರ ಪರಗತಿ ಪಡಕೊಂಬೆ ನಮ್ಮೈಯ್ಯಾ ೨

ಘನಗುರು ಚರಿತವಾ ।
ನೆನೆಯುತ ನಿರುತವಾ ।
ಮನಕ ಮಾಡುವೆ ಪ್ರೇಮ ಭರಿತವಾ ನಮ್ಮೈಯ್ಯಾ ೩

ಶ್ರವಣ ಮಾಡುವೆ ।
ತವಕದಿ ಕೊಡುವೆ ।
ಹವಣಿಸಿ ವರಗಳ ಬೇಡುವೇ ನಮ್ಮೈಯ್ಯಾ ೪

ಮಹಿಪತಿ ಸುತ ಪ್ರೀಯಾ ।
ಮಹಿಯೊಳೊಲಿವಪರಿಯಾ ।
ವಿಹಿತದಿ ಬಲುವೆನೆ ಭಕ್ತಿಯಾ ನಮ್ಮೈಯ್ಯಾ ೫

## ೪೭೭

ನೋಡು ಮನವೆ ವರಯತಿಯಾ । ನಡೆ ।
ನೋಡು ಸದ್ಭಾವದಿಂದಲಿ ಮಹಿಪತಿಯಾ ಪ

ಶರಣರ ರಕ್ಷಿಸಲಾಗಿ । ಮಹ ।
ದುರುಳ ದುರ್ಜನರನು ಶಿಕ್ಷಿಸಲಾಗಿ ।
ಧರಿಯೊಳು ರೂಪ ವಂತಾಗೀ । ಅವ ।
ತರಿಸಿ ಬಂದಿಹನು ಆನಂದ ಭೋಗಿ ೧

ಹಲವು ಜನ್ಮ ಜನ್ಮಾಂತರದಿ । ನಾನಾ ।
ಕೆಲವು ದುಷ್ಕರ್ಮ ಮಾಡಿದಾ ಫಲದಿ ।
ಬಳಲುವ ಜನರಾ । ತ್ವರಿತದಿ । ದಯ ।
ದೊಲವಿಲಿ ತಾರಿಸುತಿಹನು ಭರದಿ ೨

ಅರಿತ ಜನರ ಹೃದಯದೊಳು । ಬಹು ।
ಹರುಷದಿ ಲೋಲ್ಯಾಡುತಿಹಾನಂದದೊಳು ।
ಪರಮ ಪರುಷ ಸುಕೃಪಾಳು । ಅತಿ ತರಳಾದ
ಕೃಷ್ಣನ ಜೀವ ಜೀವಾಳು ೩

## ೪೭೮

ನಂಬಿ ಗುರುರಾಯ ನಂಘ್ರಿಯಾ । ಸಲಹುತಾನೆ
ಶರಣು ಬಂದವರನು ಕರುಣದಿಂದಲಿ ನೋಡಿ।
ತರಣೋಪಾಯದ ನಿಜವಾ ಬೀರುತಾ ೧

ಜಡಮತಿ ತನವನು ಬಿಡಿಸಿ ಸ್ಮರಣೆಕೊಟ್ಟು ।
ಒಡನೆ ಸದ್ಗತಿ ಸುಖಾದೋರುತಾನೆ ೨

ತಂದೆ ಮಹಿಪತಿ ಕುಂದ ನಾರಿಸದೇ ದೀನ ।
ಬಂಧುವೆಂಬುದು ಖರೆ ಮಾಡುತಾನೆ ೩

## ೬೭೯

ಪಾದುಕವೇ ಗುರು ಪಾದುಕವೇ ।
ಪಾದುಕವೇ ಗತಿ ದಾಯಕವೇ ಪ

ಕಲ್ಪತರು ಬೇಡಿದಲ್ಲವ ಕೊಡುವದು ।
ಕಲ್ಪಿಸದೀವುದ ಕಲ್ಪಿತ ಫಲಗಳ ೧

ದಾರುಶಿಲೆಯ ವಂದವಾರಿಸ ಲರಿಯದು ।
ತೋರುವಘಾದ್ರಿ ವಿದಾರಿಸಿ ನೂಕುವಾ ೨

ತಂದೆ ಮಹೀಪತಿ ದ್ವಂದ್ವ ಪಾದಕ ಹೊಂದಿ ।
ವಂದ್ಯ ಸರ್ವರಿಗಾಗಿ ನಂದನ ಸಲಹುವ ೩

## ೬೮೦

ಪಾಲಿಸೋ ಶ್ರೀ ಗುರುವೇ ಯನ್ನ ನೀ ಪ

ಮರವಿನ ಕತ್ತಲಿ ಮನೆಯೊಳಗಿರುವೇ ।
ಅರವಿನ ಬೆಳಗಿಗೆ ಯಂತು ನಾ ಬರುವೆ ೧

ವಿಷಯದ ಸುಖದಲಿ ಅನುದಿನ ಬೆರೆವೇ ।
ಕುಸುಮನಾಭನ ಸೇವೆಯಲಿ ಜರೆವೇ ೨

ತಂದೆ ಮಹಿಪತಿ ಸುತ ಸುರ ತರುವೇ ।
ಛಂದದಿಯಚ್ಚರಿಸ್ಯೆ ಸುಖ ತರುವೇ ೩

## ೪೮೧

ಬಾರಮ್ಮಾ ಶ್ರೀಗುರು ಜನನೀ । ಘನಕರುಣೀ ।
ಬಾರ ನಿಜ ಸುಖ ದಾನೀ ಪ

ಭವದಾಟವ ಕೇರಿಯೊಳು ಹೋಗಿ । ಮನಮರವಾಗಿ ।
ಐವರೊಳು ಕೂಡೀ । ಅವನಿಲಿ ಪರಿ ಪರಿ ಆಡಿದೆ ।
ಬಲು ಪಾಡಿದೆ । ಬಂದೇ ತವಕದಿ ಓಡಿ ೧

ಬೋಧದ ಸ್ತನಪಾನ ಮಾಡಿಸೇ । ಸುಧೆ ಉಣಿಸೇ ।
ತಾಪ । ಬಾಧೆಯ ಬಿಡಿಸೇ ।
ಸಾದರ ಭಯಕರ ತೋರಿಸೇ ನ್ಯಾವರಿಸೇ
ನಿನ್ನುದರೊಳಗಿರಿಸೇ ೨

ಭಕುತಿ ತೊಟ್ಟಿಲವನ್ನು ತೂಗಿಸೀ । ಯನ್ನ ಕೂಡಿಸೀ ।
ಪಾಡುತಖಿಲೇಶ ನಾಮಾ ।
ಸುಖನಿರ್ವಿಕಲ್ಪ ಸಮಾಧಿಯ । ಕೊಡು ಸಿದ್ಧಿಯಾ ।
ಬಾಲಕಗ ಮಹಿಪಮ್ಮ ೩

## ೪೮೨

ಬೇಟೆಯ ನಾಡಿದನೇ । ಶ್ರೀ ಗುರು ।
ಬೇಟೆಯ ನಾಡಿದನೇ । ಭವದ ಮ ।
ಮಹಾಟವಿಯೊಳಗಿದ್ದ ಮನವೆಂಬ ಮೃಗದಾ ಪ

ಏನೆಂದು ಪೇಳಲಿ ನಿಜ ಬೋಧ ಕೊಳಲವ ।
ಸ್ವಾನಂದದಲಿ ಸುಸ್ವರದಲಿ ।
ತಾನೂದಿ ನಾದವ ಕಿವಿಯೊಳೂಡಿಸಿ ಸು ।
ಮ್ಮಾನದೀ ನಿಲುವಂತೆ ಮರುಳು ಮಾಡಿದ ಗುರು ೧

ಪರಿ ಪರಿ ಸಾಧನದಿಂದಲಿ ನವವಿಧ ।
ಪರಿಯಾದ ಭಕ್ತಿಯ ಪಾಶವನು ।
ಕೊರಳಿಗೆ ಸಂದಿಸಿ ದೃಢದಿಂದ ಪುನರಪಿ ।
ಹರಿದಾಡದಂದದಿ ನೆಲೆಗೊಳಿಸಿ ಗುರು ೨

ಭಯದಿಂದ ಬೆದರಿ ಭಜ್ಜರಿಕೆಯ ಹಿಡಿದಿರೆ ।
ಶ್ರಯ ಸುಖದಾಯಕ ನಿಜ ಕರದೀ ।
ದಯದಿಂದ ಅಭಯವನಿತ್ತು ಬೋಳೈಸಿ ನಿ।
ರ್ಭಯ ಮಾಡಿ ಭ್ರಾಂತಿಯ ಚಿಂತಿ ಹರಿಸಿ ಗುರು ೩

ಸವಿ ಸವಿ ನಾಮಾಮೃತ ಆಹಾರವನಿಕ್ಕಿ ।
ಜವದಿಂದ ಹೃದಯ ಭೂ ವನದೊಳಗೆ ।
ತವಕದಿ ವಿಶ್ರಾಂತಿ ಸ್ಥಳದಲಿ ನಿಲ್ಲಿಸಿ ।
ಅವನಿಲಿ ಸತ್ವ ಚರನ ಬಳಿಯಲ್ಲಿಟ್ಟು ಗುರು ೪

ಜನವನ ವಿಜನದೊಳಗ ತಾನೇ ತಾನಾಗಿ ।
ಅನುಮಾನ ಕಳೆಸಿದಾ ಅಂಜುವನಾ ।
ಅನುದಿನ ಸುಖದೊಳಿಪ್ಪಂತೆ ಮಾಡಿ ।
ದನು ನಂದನ ನಿಜ ಸಹಕಾರಿ ಮಹಿಪತಿ ಘನಗುರು ೫

## ೪೮೩

ಬಂದ ದುರಿತಗಳ ಪರಿಹಾರ ಮಾಡಯ್ಯಾ ।
ತಂದೆ ಶ್ರೀ ಗುರು ಮಹೀಪತಿರಾಯಾ ಪ

ಕಾಲತುಂಬಿದ್ದರೆ ಆಲಸ್ಯವೇಕಯ್ಯಾ ।
ಕಾಲ ಕರ್ಮಗಳಿಂದ ಶ್ರಮಿಸುತಿಹನು ।
ಬಾಲಕನ ಕೈಯ ಸೇವೆ ಬೇಕಾದರೆ ।
ಆಲಸ್ಯ ಮಾಡದೆ ಬಲು ದುರಿತ ಛೇದಿಸು ೧

ಮುನ್ನಿನ ಕರ್ಮಗಳ ಬಹಳ ಭೋಗಿಸಿದೆನು ।
ಇನ್ನು ನಿನ್ನ ಕೃಪೆ ಅವಿಚ್ಛಿನ್ನ ಮಾಡಯ್ಯ ।
ನಿನ್ನ ಕರದಿಂದಲಿ ಚನ್ನ ಚಕ್ರವಪಿಡಿದು ।
ಮುನ್ನೆ ದಾಸರ ಶ್ರಮ ಹರಿಗಡದಂತೆ ೨

ಪರವಸ್ತು ದತ್ತಾತ್ರೇಯ ಸೂರ್ಯಕೋಟಿ ಪ್ರಕಾಶ ।
ಗುರು ಮಹೀಪತಿಯಾಗಿ ಜನಿಸಿದ್ಯೆಯ್ಯ ।
ತರಳ ದೇವಗಿನ್ನಾರುಗತಿಯು ಇಲ್ಲ ।
ಪೂರ್ಣಾಯುಷ್ಯವ ಕೊಟ್ಟು ರಕ್ಷಿಸಯ್ಯಾ ೩

## ೪೮೪

ಭಾವದ ಪೊಂಬ್ಥರಿವಾಣ ಭಕುತಿಯಾ ।
ತೀವಿದಾರತಿ ಜ್ಞಾನಜ್ಯೋತಿಯಾರುತಿಯಾ ಪ

ಆರುತಿ ಬೆಳಗುವೆನಾ । ನಮ್ಮಯ್ಯಗೆ ಆರುತಿ
ಬೆಳಗುವೆನಾ । ಶ್ರೀ ಗುರುವಿಗೆ ಆರುತಿ ಬೆಳಗುವೆನಾ ೧

ಮುಖದಲಿ ನುಡಿಯುತ ನಾಮಾವಳಿಯಾ ।
ಸಕಲರು ಪ್ರೇಮದಿ ಹಾಕಿ ಚಪ್ಪಾಳೆಯಾ ೨

ನಯನದಿ ನೋಡಿ । ಶರಣವ ಮಾಡಿ ।
ಭಯವ ನೀಡಾಡಿ । ಶ್ರುತಿಗಳಪಾಡಿ ೩

ಇಂದಿನದಿನದಾನಂದವು ನಮಗೆ ।
ಹಿಂದಿನ ಪುಣ್ಯ ಇದಿರಿಟ್ಟಿತು ಈಗ ೪

ಒಡಲ್ಗೊಕ್ಕು ಮಹೀಪತಿ ನಂದ ನೊಡೆಯನಾ ।
ಪಡೆವ ಬನ್ನಿರೋ ಬೇಗ ಮುಕುತಿಯ ಸದನಾ ೫

## ೪೮೫

ಮನ್ನೆಲೆನಾ ಪುಣ್ಯವ ಮಾಡಿದೆನೋ ।
ಧನ್ಯಗೈಸಿದೆನಗ ಗುರು ಮಹಿಪತಿ ತಾನು ಪ

ವಿಜಯಗ್ಹೇಳಿದ ಹರಿಗೀತೆಯಲಿ । ಸುಜನ್ಮಾಹುದು
ಸಂತರಲ್ಲಿ ದುರ್ಘರದ ೧

ಎನ್ನ ಸಿರದಲಭಯಕರವಿಟ್ಟು । ಚನ್ನಾಗ್ಹೇಳಿದ
ಕಿವಿಯೊಳು ಸುಜ್ಞಾನ ಗುಟ್ಟು ೨

ಕಣ್ಣದೆರಸಿದ ಭಕ್ತಿ ಮಾರ್ಗದಲ್ಲಿ । ಸಣ್ಣ
ದೊಡ್ಡದರೊಳಿಹ ಚಿದ್ಘನ ವಾ ದೋರಲಿ ೩

ಇನ್ನೊಬ್ಬರಾಶೆಯೇಕೆ ಎನಗಿನ್ನು । ಎನ್ನ
ಇಂಬಾಗಿರಲು ಗುರುದಯ ಕಾಮಧೇನು ೪

ತಂದೆ ತಾಯಿ ಗುರು ಬಂಧುಗಳಾಗಿ ।
ಕಂದಗೊಲಿದನು ಇಹಪರಗತಿಯಾ ಹೊಣೆಯಾಗಿ ೫

## ೪೮೬

ಆರತಿ ಬೆಳಗುವೆ ನಾ ಸದ್ಗುರುವಿಗೆ ಪ

ಭಾವದ ಪೊಂಬ್ಹರಿವಾಣ ಭಕುತಿಯಾ
ತೀವಿದ್ಯಾರತಿಜ್ಞಾನ ಜ್ಯೋತಿಯಲಿತ್ತಿ ೧

ಮುಖದಲಿ ನುಡಿಯುತ ನಾಮಾವಳಿಯೂ
ಸಕಲರು ಪ್ರೇಮದಿ ಹಾಕಿ ಚಪ್ಪಾಳಿಯಾ ೨

ನಯನದಿನೋಡಿ ಶರಣವ ಮಾಡೀ
ಭಯವನೀಡಾಡಿ ಸ್ತುತಿಗಳ ಪಾಡಿ ೩

ಇಂದಿನ ದಿನದಾನಂದವು ನಮಗ
ಹಿಂದಿನ ಪುಣ್ಣ್ಯೆದಿರಿಟ್ಟಿತು ಈಗ ೪

ಒಡಲ್ಹೊಕ್ಕು ಮಹಿಪತಿನಂದನೊಡಿಯನಾ
ಪಡೆಯ ಬನ್ನಿರೀಬ್ಯಾಗ ಮುಕುತಿಯ ಸಾಧನಾ ೫

## ೪೮೭

ಆರತಿ ಗುರುರಾಯಾ : ಸ್ವಾನಂದ ಚಂದ್ರೋದಯಾ
ದೋರಲು ಭವತಾಪಾ : ಹೋಯಿತು ನಿಶ್ಚಯಾ ಪ

ಚಿತ್ತಚಕೋರಕಿಂದು : ಬೋಧಾಮೃತವನುಣಿಸೀ
ಮತ್ತಹೃದಯನ್ನೈದಿಲಿಗೆ : ಸುಖವಿತ್ತೆ ಕರುಣಿಸಿ ೧

ಜ್ಞಾನಚಂದ್ರ ಕಾಂತಿಯಲ್ಲಿ : ರಾಮರಸವಿಸೀ
ತಾನೇಪದ ರೂಪದಿಂದಾ : ನೆಲಿಸಿತು ಧನ್ಯಗೈಸಿ ೨

ಛಂದದಿ ಪ್ರೇಮ ಶರಧಿ : ಹೊರಚೆಲ್ಲಿ ತೈಯಿಂದು
ತಂದೆ ಮಹಿಪತಿ ಸ್ವಾಮಿ : ಕಂದನುದ್ಧರಿಸೆಂದು ೩

## ೪೮೮

ಆರತಿ ಬೆಳಗುವೆನಾ : ಮಹಿಪತಿ ಗುರುವಿನಾ
ದೋರುವ ಪಾದುಕಿಗೆ : ಒಪ್ಪಿಸಿ ಜೀವಪ್ರಾಣ ಪ

ಜಡಜೀವತಾರಿಸಲಿ : ವಸ್ತುಗುರುರೂಪತಾಳಿ
ಪೊಡವಿಲಿನ್ನು ಮಹಿಮೆದೋರಿ
ನಿಂತ ವಿಶ್ವಾತ್ಮದಲ್ಲಿ ೧

ಇದ್ದಲ್ಲೆ ಭಾವಿಸಲಿ ಗುರುಜ್ಞಾನದಾಕೀಲಿ
ಬುದ್ಧಿಪ್ರೇರಕನಾಗಿ
ಹೇಳುವನು ಮೌನದಲಿ ೨

ಉದ್ಧವಗಯದುರಾಯಾ
ನೀಡಿದಂತೆ ನಮ್ಮಯ್ಯಾ
ಮುದ್ದು ಪಾದುಕೆಯಾಕೊಟ್ಟು
ಮಾಡೆಂದು ಪೂಜೆಯಾ ೩

## ೪೮೯

ಮಂಗಳ ಜಯಮಂಗಳ । ಶುಭಮಂಗಳ ।
ಮಂಗಳ ಮಹೀಪತಿ ಗುರುಮೂರ್ತಿಗೆ ।
ಮಂಗಳ ಶರಣರ ಸಾರಥಿಗೆ ಪ

ಹಲವು ಸಾಧನದಿಂ ತೊಳಲುತ ತತ್ವದ ।
ನೆಲೆಗಾಣದವರನು ತಾರಿಸಲಿ ।
ಒಲಿದು ಶ್ರೀಗುರು ರೂಪದಿಂದಲಿ ನರದೇಹ ।
ಇಳೆಯೊಳು ಧೃಡಿಸ್ಯವತರಿಸಿದಗೆ ೧

ಬೇಡಿದಿಷ್ಟಾರ್ಥವ ಕಾಮ್ಯ ಭಕುತರಿಗೆ ।
ನೀಡುತ ನಿರುಪಾಧಿಕ ಜನರಾ ।
ಮಾಡಿ ಜೀವನ್ಮುಕ್ತರ ನಿಜಬೋಧದ
ಲಾಡುವ ಕರುಣಾಸಾಗರಗೆ ೨

ಎಡಬಲದಲಿ ಯೋಗ ಭೋಗ ಚಾಮರದಿಂ ।
ದೃಢಸಿಂಹಾಸನ ಲೊಪ್ಪವಗೆ ।
ಪೊಡವಿಲಿ ಮೂಢ ನಂದನ ಕೈಯ್ಯುವ ।
ಬಿಡನೆಂದಭಯವಿತ್ತ ಸ್ವಾನಂದಗೆ ೩

## ೪೯೦

ಜಯದೇವ ಜಯದೇವ ಜಯದೀನದಯಾಳಾ
ಜಯಜಯ ಶ್ರೀಗುರು ಮಹಿಪತಿ ಭವತಾರಕ ಲೀಲಾ ಪ

ಮರವಿನ ಕತ್ತಲಿಯೊಳಗೆ ಮುಂದುಗಾಣದಲಿರಲಿ
ಅರವಿನದೀಪವ ಹೆಚ್ಚಿ ದೋರುತಲೀ
ಸ್ಥಿರವನು ಗೊಳ್ಳದ ಚಿತ್ತವ ಭಜನಿಗೆಲಿಸುತಲಿ
ಹರಿಸಿದ ವಿದ್ಯದಗ್ರಂಥಿಯ ಸಂಶಯ ಬಿಡಿಸುತಲಿ ೧

ಪರಿಪರಿಯಿಂದಲಿಗರದು ಬೋಧನಾಮೃತನುಡಿಯಾ
ಅರಹಿಸಿಯೋಗದ ಮಾರ್ಗವ ಸಾಂಖ್ಯದನಿಲ್ಲ ಕಡಿಯಾ
ಕರಣೇಂದ್ರಿಯಗಳ ವಡದಾಸ್ವಾನಂದದಯಡಿಯಾ
ಕರುಣಿಸಿ ವಿಶ್ವಂಭರಿತದ ತೋರಿದೆ ಇತ್ಥಡಿಯಾ ೨

ನಿನಗುತ್ತೀರ್ಣವಕಾಣದೇ ತನುವಾರತಿ ಮಾಡೀ
ಮನವೇದೀಪವು ಸದ್ಭಾವನೆ ಆಜ್ಯನೀಡಿ
ಅನುದಿನ ಬೆಳಗುವ ನಂದನುಮಹಿಮೆಯ ಕೊಂಡಾಡಿ
ಚಿನುಮಯಸುಖದೊಳು ಬೆರೆದಾಹಂಭ್ರಮ ಈಡಾಡಿ ೩

## ೪೯೧

ಯಾಕೆ ಮೈದೋರೆ ಗುರುರಾಯಾ । ನಮ್ಮ ।
ಸಾಕಿಸಲಹುವಾ ಮಹಿಪತಿ ಭಕ್ತ ಪ್ರೀಯಾ ಪ

ಶರಣರುಪಚಾರ ಭಕುತಿಯ ಮನಿಲಿ ಸಿಲುಕಿದೆಯೋ ।
ಸ್ಮರಿಸುವರ ದುರಿತ ಪರಿಹರಿಸಲಿಕ್ಕೆ ತೊಡಗಿದೆಯೋ ।
ಅರಿತವರ ಬೋಧ ಕೇಳಿಸಿದೆಯೋ ಪೂರ್ವ ।
ಜರ ಮುಕುತಿಗಾಣಿಸಲು ಹೋಗಿ ಆಲಿಸಿದೆಯೊ ೧

ಕಂಗೆಡುತಲಿವೇ ನಿಮ್ಮ ಕಾಣದೀ ನಯನಗಳು ।
ಭಂಗು ಬಡುತಿವೇ ನುಡಿಯ ಕೇಳದೆ ಶ್ರವಣಗಳು ।
ಅಂಗ ಸಂಗಕ ಸಿರಕರಗಳು ಮರುಗಿ \
ಮುಂಗಾಣ ವೆದೆಗೆಟ್ಟು ಕರಣ ವೃತ್ತಿಗಳು ೨

ಮಂದ ಭಾಗ್ಯರಿಗೆ ನಿಧಾನ ಮರಿಯಾದಂತೆ ।
ಇಂದು ಮಾಡಲಿ ಬ್ಯಾಡಾ ನ್ಯೂ ನಾರಿಸುದುಚಿತವೇ ।
ಎಂದೆಂದು ನೀನೆ ಗತಿಯಂತ ನೆನೆವ
ನಂದನರ ಸಲಹು ದಯದಿಂದ ಮೋದಲಂತೆ ೩

## ೪೯೨

ರಾಜ ರಾಜ ಮಹಾರಾಜ ಮಹಿಪತಿ
ರಾಜನೆಂಬೋನಾಮವು ನೆಲಿಗೆ ।
ಸಾಜ ಸಾಜವಿದು ನೋಡಲು ಗುರುವಿಗೆ ವಿರಾಜಿಸು
ತಿಹುದು ಜಗದೊಳಗೆ ೧

ಸಾದರ ಗುರುಭಕ್ತಿಯ ನಿಜಕ್ಕೆಯು ।
ಸಾಧನದಳ ಚತುರಂಗಗಳು ।
ಸಾಧಿಪ ಅನಾಹತದ ಘನ ಭೇರಿಯು ।
ಊದುವ ಬೋಧದ ಕಹಳೆಗಳು ೨

ಹರಿಕೀರ್ತನೆ ಗಜ ರಥಗಳ ನಡೆಸುತ ।
ಮೆರೆವ ಸುಪ್ರೇಮ ಸಚಿವನಿಂದ
ಹರಿನಾಮಾಯುಧದಲಿ ಪುಂಡರಾರಿ ।
ಸೆರೆ ವಿಡಿಯುತ ದುರಿತವ ತರಿದಾ ೩

ತನುಕರಣೇಂದ್ರಿಯಧಿಪ ತಾನೆನುತಲಿ ।
ಕೊನರುವ ದೇಹಾಭಿಮಾನಿಗಳ ।
ಚಿನುಮಯದರುವಿನ ಅಸ್ತದಿ ಭಂಗಿಸ್ಯ ।
ವನನಿಜ ಸ್ಥಳವನು ಬಿಡಿಸಿದನು ೪

ಪರದೇಶ ವಿಜಯ ಸಾಮ್ರಾಜ್ಯನುಭವ ।
ಮೆರೆವ ಸಿಂಹಾಸನವೇರಿದನು ।
ಚರಣಕೆರಗಿ ಕೈ ಮುಗಿಯುತ ನಂದನು ।
ಹರುಷದಿ ಕೀರ್ತಿಯ ಪಾಡಿದನು ೫

## ೪೯೩

ವೃಂದಾವನಿ ದೇವಿ ತಂದೆ ಮಹಿಪತಿ ಪಾದಾ ।
ದ್ವಂದ್ವವೆನಗೆ ತೋರಮ್ಮಾ ಪ

ತಪ್ಪಿ ತನ್ನವರಗಲಿಪ್ಪ ಶಿಶುವ ತಾಯಿ ।
ಗೊಪ್ಪಿಸು ವಂದದ ಲೀಗ
ಸಪ್ಪುಳಾಗದೆ ನಿನ್ನೊಳಿಪ್ಪ ಸದ್ಗುರುವಿನಾ ।
ಒಪ್ಪುವಂಘ್ರಿಯಾ ಬಿಗಿದಪ್ಪುವೆ ಮನದಿಂದೆ ೧

ಚಾತಕ ನಲಿದು ಜೀಮೂತ ಬಯಸುವಂತೆ ।
ಶೀತಾಂಶುವಿಗೆ ಚಕೋರಾ ।
ಆತುರಗಡ ನಿಜನಾಥನ ಗಮನಕೆ ಪಾತಿವೃತೆಯ
ಪರಿಧಾತು ವಾಗಿದೆಯನ್ನ ೨

ಸುರನರೋರಗರೆಲ್ಲಾ ನಿರುತ ಭಜಿಸಿ ನಿನ್ನಾ ।
ಹರಿದಯ ಪಡೆದರಂತೆ ।
ಮರೆಯದೆ ಹೃದಯ ಮಂದಿರದಿ ಚಿದ್ಘನ ಗೋ ।
ಚರಿಸುವಾ ಪರಿಯಲಿ ಕರುಣಿಸೆನಗೆ ತಾಯೆ ೩

## ೪೯೪

ಶರಣು ಶ್ರೀ ಗುರುರಾಯ । ಶರಣು ಬುಧ ಜನಪ್ರೀಯ ।
ಶರಣು ಪಾವನ । ಶರಣು ನಮ್ಮಯ್ಯ ಪ

ಧರಣಿಯೊಳಗ ವಿದ್ಯ ದಾವರಣವಿಕ್ಷೇಪದಿ ಹರಿಯ
ಸ್ಮರಣೆ ಮರೆದು ಭವ ಜನುಮ ಮರಣ ಬಲಿಗೆ ಸಿಲುಕಿ ।

ಹರಣ ಹಾಕುತಿದೆ ನೋಡೀ ಕರುಣದಿಂದ ಭಯ ನೀಡಿ ।
ತರಣೋಪಾಯ ದೋರಿ ದೀನೋದ್ಧರಣ ಮಾಡಿ ಹೊರೆದೇ ೧

ನರದ ಹುಳುವ ತಂದು ಮಂದಿರದೊಳಿಟ್ಟು ।
ತನ್ನಂಗ ತೆರದಿ ಮಾಳ್ಪಾ ಭೃಂಗಿಯ ತೆರದೆ ನಂಬಿದವರಾ ।
ಕರೆದು ಬೋಧಾಮೃತದ ನುಡಿವೆರದು ಚಿನುಮಯಾನಂದ
ಮರದ ಠಾವ ತಪ್ಪಿಸಿ ಎಚ್ಚರದೊಳು ನಿಲಿಸಿದೇ ೨

ಮುಕುತಿ ಸಾಧನವಾದಾ ಭಕುತಿ ನವ ವಿಧ ಶಾಸ್ತ್ರ ।
ಯುಕುತಿ ಪ್ರಾಬಲ್ಯ ವಿರಕ್ತಿಯನಗಿಲ್ಲಾ ।
ಶಕುತ ಗುರು ಮಹಿಪತಿಯ ಭಕುತ ನೆನಿಸಿದಕಿನ್ನು
ಅಕುತೋ ಭಯ ಹೊಂದುವಾ ಶಕುತಿ ನೀಡಯ್ಯಾ ೩

## ೪೯೫

ಶರಣೆಂದು ಗುರು ಮಹಿಪತಿ ಶುಭ
ಚರಣಕೆ ಹೊಯ್ಯಂದ ಹಂಗುರವ ।
ಗುರುವಿನ ಬಿರುದವ ಸಾರಿ ಹೇಳ್ಯಾಡುತ
ಹೊಯ್ಯಂದ ಡಂಗುರವ
ವರಮುಖ ಜಾಂಗಟೆ ನಾಲಿಗಿ ಗುಣಿಯಿಂದಾ
ಹೊಯ್ಯಂದ ಡಂಗುರವ
ಗುರುನಾಮ ನಾದದ ಝುಂಕಾರ ಗುಡುವಂತೆ
ಹೊಯ್ಯಂದ ಡಂಗುರವ ಪ

ಸಂತರೊಳಗ ಮಹಂತನು ಈತನೇ ।
ನಿಂತರೆ ನೆರೆಯಲಿ ಸ್ವರ್ಗದ ಸುಖವುಂಟು ।
ಇಂತಿಪ್ಪ ಪ್ರಪಂಚ ಪರಮಾರ್ಥವೆನಿಸಿದ ।
ವೇದಾಂತವ ಕರತಲ ಮಲಕಂತೆ ತೋರಿದ ೧

ಗುರು ಎಂದರೆ ಹಗದೊಳು ತಾನೇ ತಾನೇ ।
ಮರಳು ಮಂಕಗಳಿಗೆ ಗುರುತನ ಥರವೇ ।
ನೆರೆಯಂತ್ರ ಮಂತ್ರದಿ ಸಿಂತ್ರಗೆಡಹುದಲ್ಲಾ ।
ಪರಬ್ರಹ್ಮ ಇದೆಕೋ ಯಂದಯ್ಯ ತೋರುವ ೨

ನರ ನಲ್ಲಾ ನರನಲ್ಲಾ ಅವತಾರ ದೇಹೆಂದು ।
ಧರೆಯೊಳು ಮುಂಡಿಗೆ ಹಾಕುವೆ ಇದಕಿನ್ನು ।
ಗುರುತಿನ ಮಾತವ ಅರಿತನು ನಂದನ ಘನ ।
ನೆರೆ ಸಂಶಯಾತ್ಮಗ ದುರ್ಗತಿ ತಪ್ಪದು

## ೪೯೬

ಶರಣೇ ಅಜಭವ ಮುಖ್ಯ ಸುರಾರ್ಚಿತ ।
ಶರಣೇ ವಿಧು ಬಿಂಬಾನನ ಚಂಪಕ ।
ವರಣೇ ತ್ರಿಭುವನ ಜೀವನ ರಕ್ಷಕ ಶರಣೇ ದುರಿತಚಯಾ ।
ಹರಣೇ ಶ್ರೀದೇವಿ ಜಾಂಬೂನದಾಂಬರ ।
ವರಣೇ ಫಣಿವರಶಯನ ಚಿತ್ತನ ।
ಹರಣೇ ಕುಶಲದಿ ಮಹಿಪತಿ ನಂದನುದ್ಧರಸೆ ಜಯ ಜಯತು

## ೪೯೭

ಮರೆತರತಾಮರ ವಲ್ಲದು ನೋಡಲು ।
ಅರತರತಾ ಅರವಲ್ಲದು ನಿಜದೊಳು ।
ಅರಹು ಮರಹು ಎರಡನೇ ಮೀರಿಹ ।
ಘನದರುವೇ ತಾನಾಗಿ ।
ಕುರುವಿನೊಳಿರುವಾಗಿಹ ಸ್ವಾನಂದದಿ ।
ತೆರವಿಲ್ಲದೆ ಸೆಲೆತುಂಬಿ ತುಳುಕುತಿಹ ।
ಪರವೆಂದೆನಿಸಿದ ಶರಣ ರಕ್ಷಕ ।
ಗುರು ಮಹಿಪತಿ ಜಯ ಜಯತು

## ೪೯೮

ತೋರುವ ದೃಶ್ಯವ ಕಾಂಬುವ ನಯನಕ ।
ಸಾರಿಯ ಮನವನು ನೋಡುವ ಬುದ್ಧಿಗೆ ।
ಮೀರಿಹ ನಿತ್ಯ ನಿರಂಜನ ವಸ್ತುವೆ ।
ವಿಶ್ವಭರಿತನೆಂದು ।
ಸಾರುವ ಶೃತಿಯಿಂದಾತ್ಮ ಪ್ರಚೀತಿಯ ।
ಸೇರಿಸಿ ಭಜನಿಯ ಕ್ರಮವನರಸಿ ಭವ ।
ವಾರಿಸಿ ಚಿತ್ಸುಖಲಿರಿಸಿದ ಮಹಿಪತಿ ।
ಸದ್ಗುರು ಜಯ ಜಯತು

## ೪೯೯

ಮೊದಲಿಗೆ ಜಹದಾರ್ಜಹ ಲಕ್ಷಣ ಸಾಧಿಸಿ ।
ವಿದಿತದಿ ಅಜಹರ್ಲಕ್ಷಣ ಬೋಧಿಸಿ ।
ಪದುಳವೆ ಜಹದಾರ್ಜ ಲಕ್ಷಣವನು ।
ಹೃದಯದಿ ನೆಲೆಗೊಳಿಸಿ ।
ಇದರ ದರಿಸಿ ಭವದ್ವೆದರಿಕಿ ಹಾರಿಸಿ
ಸದಮಲ ಬ್ರಹ್ಮನ ಕಳೆಯನು ತೋರಿಸಿ ।
ಮುದದಲಿ ಭಕ್ತರ ಪಾಲಿಪ ಮಹಿಪತಿ ।
ಗುರುಮೂರ್ತಿ ಶರಣು

## ೫೦೦

ಆಡುವರೇಚಕ ಪೂರಕ ನಂದಿಯ ।
ಜೋಡಿಸಿ ಎರಡನು ಮೆರೆವಸುಷಮ್ನಿಯ ।
ನಾಡಿಯ ರಥಿಕರ ಹೂಡುತ ಮೆಲ್ಲನೆ ।
ನಿಜಮನ ಸಾರಥಿಯಾ ।

ಕೂಡಿಸಿ ಹರುಷಲೇರಿ ನಡೆಸುತ ಸ ।
ವಾಡಿಕಿಯಿಂದಲಿ ಮೇಲ್ಗುರಿಯಾತ್ರೆಯ ।
ಮಾಡಿ ವಿಲಾಸದಲಾಡಿದ ಮಹಿಪತಿ ।
ಗುರುಮೂರ್ತಿಗೆ ಶರಣು

## ೫೦೧

ಶ್ರೀ ಗುರು ಮೂರ್ತಿಯ ನೋಡಿ ನೋಡಿ ।
ಭಕುತಿಲಿ ನಮನವ ಮಾಡಿ ಮಾಡಿ ।
ಬೇಗನೆ ವರಗಳ ಬೇಡಿ ಬೇಡಿ ಪ

ಜನುಮ ಜನುಮದಲಿ ಅನುದಿನ ತಪವನು ।
ಘನತರ ಮಾಡಿದ ಜನರುದ್ದೇಶದ
ವನಿಯೊಳಗುದಿಸಿದ ನೋಡಿ । ನೋಡಿ ೧

ನಡೆ ನುಡಿ ಗಡಣರಿಯದೆ ಜಡ ಮೂಢರು ।
ದೃಢದಲಿ ಒಡಲ್ಗುಗೆ ಒಡನುದ್ಧರಿಸುವ ।
ಅಡಿಗಡಿಗೊಲಿವುತ ನೋಡಿ ನೋಡಿ ೨

ನಗೆ ಮೊಗ ಮಹಿಪತಿ ಸುತ ಪ್ರಭು ಬಗೆ ಬಗೆ ।
ನಿಗಮಾರ್ಥಗರದು ಭಕುತರ ಸುಗಮದಿ ।
ತಗಬಗಿ ನಲಿಸುವ ನೋಡಿ ನೋಡಿ ೩

## ೫೦೨

ಶ್ರೀ ಗುರುಯನ್ನ ಕಾಯೋ ಕರುಣಿಸಿ ।
ಬ್ಯಾಗನೆ ಪಾದವ ದೋರಿಸಿ ನಯನಕ ।
ಭವ ಬಲಿಯನು ಬಿಡಿಸಿ ಪ

ಶರಣೆಂದು ಸಕಲರು ಬಂದು ಪೋಗುವಾ ।
ಆ ಮಹಾದ್ವಾರದಲಿ ।

ಇರುತಿಹ ನಿನ್ನಯ ಭಕ್ತರ ಬಳಿಯಲಿ ।
ಇಟ್ಟು ನೀ ಅಚಲದಲಿ ೧

ಸಂಬಳವಿನಿತಿನಿತವ ನೊಲ್ಲೆ ಕೇಳೈಯ್ಯಾ ।
ಬೇಡುವೆ ನಾನೊಂದನು ।
ಹಂಬಲಂದಣುವಂತೆ ನಾಮ ಭಾಂಡಾರವ ।
ಮಾಡೆನ್ನಾಧೀನವನು ೨

ತೊಡಿಸಿ ಕರುಣ ಕವಚವ ಸರ್ವಾಂಗ ।
ಅಭಯ ಮಕುಟವನು ।
ಇಡು ಶಿರದಲಿ ಕೊಟ್ಟು ಬೆಳಗುವ ಕೀರ್ತನಿ ।
ಶ್ರವಣ ಕುಂಡಲವನು ೩

ಕರದಲಿ ಧೃತಿ ಬೆತ್ತವನಿತ್ತು ಅನುದಿನಾ ।
ಚಲ್ವಾದ ಸದ್ಭಕ್ತಿಯಾ ।
ಮೆರೆವ ಮಂಟಪದೊಳು ನಿಲಿಸೆನ್ನ ದುರಿತದ ।
ತಟ್ಟದಂದದಿ ಶಖಿಯಾ ೪

ಇಹ ಪರದಲಿ ಏಕೋ ದೇವನೆಂಬ ಮುದ್ರಿಯಾ ।
ಭಾವದ ಬಲುಪಿಂದಾ
ಮಹಿಪತಿ ಸುತ ಪ್ರಭು ಕೊರಳಿಗೆ ಹಾಕೆನ್ನ ।
ಸಲಹು ನೀ ಕೃಪೆಯಿಂದಾ ೫

## ೫೦೩

ಶ್ರೀ ಗುರುವೇ ನೀ ತೋರಿಸೋ ದಯದಿಂದ ಲೆನಗೆ ।
ಬೇಗದಿ ಬಂದೆನ್ನ ದೇವನೀಗ ಪ

ತೈಲ ಯಂತ್ರ ದೊಳಿಪ ಪಶುವಿನಂದದಿ ಜೀಯಾ ।
ಹಲವು ಜನ್ಮವ ತಾಳಿದೆನಯ್ಯಾ ೧

ನಿನ್ನ ಸ್ಮರಣೆ ಮರೆದು ನಾನಾ ಉಪಾಸನೆ ಹಿಡಿದು ।
ಬನ್ನ ಬಟ್ಟೆನೋ ಯಜ್ಞರ ಜರಿದು ೨

ದೂರ ಮಾಡಿ ಅಭಾವಾ ಭವ ಬಂಧನ ಹರಿವಾ ।
ಸೂರೆಗೊಳಲಿಲ್ಲಾ ಭಕ್ತಿ ಸುಖವಾ




ಸರ್ವಾಪರಾಧವಾ ಕ್ಷಮಿಸಿ ಯನ್ನುದ್ಧಾರವಾ ।
ಉರ್ವಿಲಿ ಮಾಡು ಪಿಡಿದು ಕರವಾ ೪

ಇಹಪರ ಸಹಕಾರ ಕರುಣಾಬ್ಧಿ ಪಾರಾವಾರಾ ।
ಮಹಿಪತಿ ಸುತ ಪ್ರಭು ಉದಾರಾ ೫

## ೫೦೪

ಶ್ರೀ ಮತ್ಸು ಬೋಧ ಘನ ಗಂಭೀರ ಗುಣಸುಜನ ।
ಸ್ತೋಮ ವಂದಿತ ಪಾದ ಯೋಗ ಸಾಂಖ್ಯಗಳಾದ
ಸೀಮೆಯಲಿ ನಲಿದಾಡಿ ತುರ್ಯದಲಿ ಮನೆಮಾಡಿ ।
ಸಹಜಾವಸ್ಥೆ ಗೂಡಿ ।
ಆ ಮಹಾ ಪದದಿಂದ ಪರಿಹರಿಸಿ ಭವಬಂಧ ।
ಕಾಮಿತಾರ್ಥವ ನೀವ ದೀನರುದ್ಧರಿಸುವ ।
ಶ್ರೀ ಮಹಿಪತಿ ಸ್ವಾಮಿ ನಂದನೊಡಿಯನು ನೇಮಿ
ಹರಿಕಥಾನಂದ ಪ್ರೇಮಿ ।

## ೫೦೫

ಸದ್ಭಾವದಿಂದ ಗುರುವೇ ಗುರುವೆಂದು ಬಾಗಿ
ಸದ್ಭಕ್ತನಾಗಿ ಮರಿಯಾ ಮರಿಯಾದೆ ಹೋಗಿ
ಸದ್ಬೋಧಸಾರ ಗರವಾ ಗರವಾಮೃತಾದಾ
ಚಿದ್ಭಾನುದೋರಿ ಹೊರೆವಾ ಹರಿವಾಭವಾಂಧಾ ೧

ಗುರುಪಾದ ಕಾಣದನಕಾದನ ಕಾವನಾಗೀ
ಮರದೆನ್ನ ತನ್ನದೆನುತಾದೆನುತಾಂನರಾಗಿ
ಅರಿತೀಗ ಮಾಡಿ ಗುರುತಾಗುರು ತಾತನಂಘ್ರಿ
ಪರಮಾರ್ಥವಸ್ತು ವರ ದೇವರ ದೇಶಸಾರಿ ೨

ಗುರುಮಾರ್ಗ ಬಿಟ್ಟು ಬರುದೇ ಬರುದೇನೊ ಪ್ರಾಣಿ
ಅರತೇನುಶಾಸ್ತ್ರ ಪರಮಾಪರಮಾರ್ಥಗಣೀ
ಧರಿಸುದೆ ಅಂಜನವನೀ ನವನೀತವೆಂದು
ದೊರಿಯದುರಂಜನದ ತೀ ನದಲೀಸುದು ಇಂದು ೩

ಗುರುಹಸ್ತಮಸ್ತಕದಲೀ ಕದಲೀತೆ ಕ್ಲೇಶಾ
ದೊರವನು ಹೃತ್ಕಮಲದಾಮಲದಾತ್ಮ ಈಶಾ
ಗುರುಮಿತ್ರ ಮಾತೃ ಜಕನಕಾಜನಕಾರ್ತಬಂಧು
ಶರಣ್ಹೊಕ್ಕು ನೋಡಿ ಸುಖವಾ ಸುಖವಾಗದೆಂದು ೪

ಇರುತಿಪ್ಪನೆಲ್ಲಿ ಗುರುತಾ ಗುರುತಾದ ಕಾಶೀ
ನೆರೆಗಂಗಿ ಪಾದತೀರ್ಥತೀರಥಾಧರಾಶಿ
ಗುರು ವಿಶ್ವನಾಥನೆನುವಾನೆನುವಾವನೆಲ್ಲಿ
ನರರೊಳು ಧನ್ಯ ತಮನುತ್ತ ಮನೊರ್ವಿಯಲ್ಲಿ ೫

ಕಾಣದೆ ಕಂಗಳಲಿತಾ ಲಲಿತಾದ ನೋಟಾ
ಜಾಣೇಸಿ ಕೋಟಿ ತರಣೀ ತರುಣೀಯ ಕೂಟಾ
ಕಾಣೇಸಿ ಉನ್ನಮನೆಯಾ ಮನಿಯಾವೆ ನೋಡಿ
ಪ್ರಾಣವಕಾವ ಗುರುವೀ ಗುರುವೀನ ಪಾಡಿ ೬

ಮನಮುಟ್ಟಿಮುದ್ರಿ ಸಲಿತಾಸತಿತಾಳಭೇರಿ
ಅನುಹಾತ ಘೋಷಶ್ರವಣಾಶ್ರವಣಕ್ಕೆ ಬೀರಿ
ತನುಭಾವವನ್ನು ಮರಸೀ ಮೆರಸೀದನೆಂದು
ನೆನಿಬೇಕು ಸದ್ಗುರುವಿನಾರೂಪ್ಪಿನಾಗತಂದು ೭

ಗುರುಮೂರ್ತಿಗೆಂದನರನೇ ನರನೇವನವನು
ಗುರುಭಕ್ತಿ ಗಳ್ಳಕುಶಲಾಕುಶಲಾದವನು
ಗುರುನಾಮ ಕೂಗದವನ್ನೈದುವನೇ ಗತಿಯಾ
ಗುರುಪಾದಪೂಜಿಮರತಾ ಮರತಾವನೀಯಾ ೮

ಗುರುಅಷ್ಟಕದ ಮಹಿಮಾ ಮಹಿಮಗೇಬಲಾ
ಸ್ಮರಿಸೀದನ್ನು ಭಕುತೀಭಕುತೀವದೆಲ್ಲಾ
ಗುರು ಮಹೀಪತಿ ಕರುಣಾ ಕರುಣ ನುಪಾಡೀ
ಕರಕೊಂಡುಜ್ಞಾನಸುಧೆಯಾ ಸುಧಿಯಾದೆ ನೋಡಿ ೯

## ೫೦೬

ಸಲಹು ಶ್ರೀ ಗುರುರಾಯಾ । ಸಲಹು ಬುಧ ಜನಪ್ರೀಯಾ ।
ಸಲಹೆನ್ನ ಪರಮ ಗೇಹ್ಯಾ ಪ

ಚಿಕ್ಕವನು ನಾ ಮೊದಲು । ಸೊಕ್ಕಿ ಭವಸುಳಿಯೊಳಗೆ ।
ಸಿಕ್ಕಿ ಬಹು ನೊಂದೆನೆಂದು ।
ಹೊಕ್ಕೆ ಮೊರೆ ನಿನ್ನ ಹಿಂದಿಕ್ಕಿಕೋ ದಯದಿಂದ ।
ಮಕ್ಕಳಂದದಲಿ ಚೆನ್ನಾಗೆನ್ನಾ ೧

ಪಿಂತಿನಾ ಭವಣೆಗಳು । ಎಂತಾದರಾಗಲೀ ।
ಶಾಂತ ಮೂರುತಿಯೇ ಎನ್ನಾ ।
ಅಂತರಂಗದಲಿನ್ನು ನಿಂತು ನಿನ್ನಯ ರೂಪ ।
ಸಂತತವಾಗಿ ದೋರ್ರೋ ಬೀರೋ ೨

ಅನ್ಯಪಥಕೆಳಿಸಿದಾ ಘನ್ನ ತಪ್ಪವ ಕ್ಷಮಿಸಿ ।
ನಿನ್ನ ಪದಯುಗಳ ದೋರಿ ।
ಸನ್ನುತವೆ ಮಹಿಪತಿ ಚಿನ್ನ ಕೃಷ್ಣನ ಸ್ವಾಮಿ ।
ಇನ್ನಾರೆ ದಯಮಾಡೋ ನೋಡೋ ೩

## ೫೦೭

ಸುಖಿಯಾದೆನು ಶ್ರೀ ಪಾದಾ ಹೊಂದಿ ಗುರುವಿನಾ ಪ

ಪರಸಕೆ ಕಬ್ಬಿಣ ಸಾರನೆರೆದಂತೆ ।
ಸರಿತ ಮಹಾನದಿಯೊಳು ಬೆರೆತಂತೆ ।
ನೆರೆ ಕೀಟಕ ಭೃಂಗಿ ಬೆರೆಸಿದಂತೆ ೧

ಬಡವಗ ನಿಧಾನವ ದೊರೆತಂತೆ ।
ಪೊಡವಿ ಬೆಳೆಗೆ ಘನ ಮಳೆಗರೆದಂತೇ
ಜಡ ಮತಿಗೇ ಶಾರದೆ ಒಲಿದಂತೆ ೨

ತಂದೆ ಮಹೀಪತಿ ಕಂದಗ ವಲಿದು ।
ಛಂದದಿ ಭಕುತಿಯ ದಾರಿಗೆ ತಂದು ।
ಬಂದದ ಸಾರ್ಥಕ ಮಾಡಿದೆ ನಿಂದು ೩

## ೫೦೮

ಹಬ್ಬವನು ಮಾಡಿದನು ಗುರುರಾಯ
ಇಬ್ಬರೊಡಗೂಡಿಸುವದಿಂಗಿತದ ನೆಲೆಯರಿದು ಪ

ಶ್ರವಣದಕ್ಷತೆ ಕೊಟ್ಟು ಪರಮಾರ್ಥ ದೌತಣದಿ ।
ಅವನಿಯೊಳು ಪರಮ ಕರುಣ ಸ್ನೇಹದಿ ।
ಸುವಿವೇಕ ವೈರಾಗ್ಯ ವೆಂಬ ಜಲ ಸಮಬೆರಸಿ ।
ತವಕದಲಿ ಮಜ್ಜನವ ಗೈಸಿದನು ಮುದದಿ ೧

ಸ್ಥಿರ ಚಿತ್ತ ದಾಸನದಿ ಕುಳ್ಳಿರಿಸಿ ಸದ್ಭಾವ
ಮೆರೆವ ಹೊಂದಳಿಯೊಳು ಬೋಧ ಸುಧೆಯಾ
ಪರಿ ಪರಿಯಲುಣಿಸಿ ಅಪರೋಕ್ಷದನುಭವ ಕಲಶ
ನೆರೆವಿಡಿಸಿ ಕೈದೊಳಿಸಿ ಭವದೆಂಜಲ ಗೆಳಸೀ ೨

ಸಹಜಾವಸ್ಥೆ ತಾಂಬೂಲವನು ಕರದಿತ್ತು ।
ವಿಹರಿಸುತ ನಿರ್ವಿಕಲ್ಪ ಸಮಾಧಿಯಾ ।
ವಿಹಿತದುಡುಗೊರೆ ಹೆಗಲಲಿಪೊದಿಸಿ ಪಾಲಿಸಿದ ।
ಮಹಿಪತಿ ಸ್ವಾಮಿ ನಂದನಗ ದಯ ಬೀರಿ ೩

## ೫೦೯

ಹಿಡಿ ಹಿಡಿ ಭಾವದಲೀ ಗುರು ಪಾದಾ ಪ

ಘೋರ ಸಂಸಾರದ ಬಲಿಯನೇ ದಾಟುವ ।
ಬೀರುವ ಸ್ವಾನಂದ ಬೋಧಾ ೧

ಮನಸಿನ ಕಲ್ಪನೆ ಹಾರಿಸಿ ತೋರುವ ।
ಚಿನಮಯ ನಿಜ ಸುಖ ಪಾದಾ ೨

ಗುರುವರ ಮಹಿಪತಿ ಪ್ರಭು ದಯದಿಂದಲಿ ।
ದೊರೆಯುವ ಪರಮ ಪ್ರಸಾದಾ ೩

## ೫೧೦

ಹುಚ್ಚಾದೇನಣ್ಣಾ । ಮುಚ್ಚುಗೊಂಡು ನಾನು ಪ

ಕರವಿಟ್ಟ ಸಿರಸದಲ್ಲಿ । ಅರುಹಿದ ಕಿವಿಯಲ್ಲಿ ।
ಮರುಳು ಬೀಜಾಕ್ಷರನು ೧

ಮನದ ಮತಿಯಾ ಕೆಟ್ಟು । ಜನದ ಲಜ್ಜೆಯಾ ಬಿಟ್ಟು ।
ಕುಣಿದು ಕೂಗುವೆ ಹರಿನಾಮವನು ೨

ಹಿಂದಾದಾ ನೆನೆಯದೆ ಮುಂದ ಹಂಬಲಿಸದೇ ।
ಬಂದದನುಂಡು ಕುಳ್ಳಿರುವೆನು ೩

ಅರಿವೆಯ ಹೊದ್ದುಕೊಂಡು । ಪರವೆ ಪ್ರಪಂಚ
ಗಂಡು । ಜರಿದು ಬಲ್ಲವಿಕೆ ಹಮ್ಮವನು ೪

ಗುರು ಮಹಿಪತಿ ಬೋಧಾ । ಹರಿಸೀ ಸಂಶಯ ಬಾಧಾ ।
ಮರೆಸಿತು ಅನ್ಯ ದಾರಿಯನು ೫

## ೫೧೧

ಹೇಳಯ್ಯಾ ಶ್ರೀ ಗುರುವೇ
ಬಾಳುವೆನದರಂದವಿ ಸುರ ತರುವೇ ಪ

ಹೀನ ಯೋನಿಯ ಮುಖದಲಿ ಬಂದು
ನಾನಾ ತಾಪತ್ರಯದಿ ಬಹುನೊಂದು
ನೀನೆ ಗತಿಯನುತ ಬಂದೆ ನಿಂದು
ನಾನು ಭವದಿಂದ ತರಿಸುವ ಉಪಾಯವ ವಂದು ೧

ಕೇಳಯ್ಯಾ ನೀ ಕಂದಾ ಹೇಳುವ ನುಡಿ ಗ್ರಹಿಸಲಾನಂದಾ
ಆದಿಯಲಿ ದುರ್ಜನ ಸಂಗವಳಿದು
ಸಾಧುಜನಸಂಗವನೇ ಬೆರೆದು
ಬೋಧೆಯಂದಲಿ ಮನನವ ಬಲಿದು
ಸಾಧಕನ ಉದ್ಯೋಗಿಸ ಸಿದ್ಧಿಯಹುದು ೨

ಸ್ವಾಮಿ ಸಜ್ಜನ ಸಂಗವನೇ ಬಯಸಿ
ಪ್ರೇಮದಿರಬೇಕು ಇದೇ ನಿತ್ಯವೆನಿಸಿ
ತಾಮತ್ತರ ಘಳಿಗಿಯೊಳು ವಲಿಸಿ
ಭ್ರಮಿಸುತಿಹಿದು ಅದು ಏನೆಂದು ವಿಸ್ತರಿಸಿಹೇ ೩

ಕೇಳಯ್ಯಾ ಲೋಕವೆಲ್ಲಾ ಛಲನೆ ಮಾಡುವುದು
ವಿಕಲ್ಲುಳ್ಳದು ನೋಡುಮನವದು
ನಾಕು ತೆರದೊಳಿಸಿ ಕೊಳ್ಳಲದು
ಬೇಕಾದುದನು ವಸ್ತು ಇದಿರಿಡುತಲಿಹುದು ೪

ಹೇಳಯ್ಯಾ ನಳಿನ ಜಪರಾಸುರಗಳಿಗೆ
ಛಲಿಸಲಿಕೆ ಮನ ಅಂಗನಿಗೆ
ಬಲಿ ವಿಡಿದು ಮೋಹಿಸಿದ ರಾಗ
ಇಳಿಯೊಳಗ ವಶಯಂತಹುದು ಮನುಜಗ ೫

ಕೇಳಯ್ಯಾ ಶುಕನಾರದ ಭೀಷ್ಮರ ನೋಡಾ
ವಿಕಳಿಗೊಳ್ಳದೆ ಮನಕೂಡಾ
ಸಕಲಗೆದ್ದರು ಅತಿಗಾಢಾ
ಯುಕುತಿಲೆ ಮನೊಲಿಕೊವ್ವೈರಾಗ್ಯದಿಂದ ಧೃಡಾ ೬

ಹೇಳೈಯ್ಯಾ ಜ್ಞಾನಸಾಧನವೆಂಬುದನರಿಯೇ
ಎನಗೆಂತಹದಿಂತಿದು ಧೋರಿಯೇ
ನೀನೇ ತಾರಿಸುದಯದೆನ್ನ ಸಿರಿಯೇ
ನಾನು ಎಂದೆಂದು ತವಪಾದಸ್ಮರಣಿ ಮರಿಯೆ ೭

ಎಂದು ಬಾಗುವ ಕಂದನನು ನೋಡಿ
ಮಂದಹಾಸದ ಭಯ ಕರ ನೀಡಿ
ಛಂದದಲಿ ತರಿಪಂತೆ ಮಾಡಿ
ಬಂದು ಧನ್ಯ ಗೈಸಿದ ಗುರು ಮಹಿಪತಿ ಕೈಯ್ಯಗೂಡಿ ೮

## ೫೧೨

ಏನೆಂದುಸುರುವೆ ಈ ನವರಾತ್ರಿಯಾ ।
ಸ್ವಾನಂದ ಸುಖಮಯ ಮಹಿಪತಿ ಚರ್ಯಾ ಪ

ಹತ್ತೆಂಟು ದಿನವಿರೆ ಹರುಷದಲಹರೆ ।
ಮೊತ್ತ ಜನರು ಕೂಡಿ
ಮನೆಯ ಶೃಂಗಾರ ಮಾಡಿ ।
ಭಿತ್ತಿ ಬಾಗಿಲುಗಳ ಬಣ್ಣದಿ ನಿಚ್ಚಳ ।

ನೆತ್ತಿ ಮಂಗಳ ಕರವಾಗಿಹ ವಿಸ್ತಾರ ।
ತೆತ್ತ ಮಾಡಳರವಿ ತಳಿಲು ತೋರಣದಿ ।
ಮತ್ತೆ ದೇವಾಲಯ ಮಂಡಿತ ಜಗಲಿಯಾ ।
ಸುತ್ತ ಕದಳೀ ಕಂಭದಿ ಮ್ಯಾಲಿಯ । ಉತ್ತಮ ಮಂಟಪದಿ
ತರಗು ತೆಂಗು । ಉತ್ತತ್ತೀ ಬಹು ಓಲವೀ ಕಟ್ಟಿಹ ।
ವತ್ತೊತ್ತಿ ಥರ ಥರದಿ ನಮ್ಮಯ್ಯಾನಾ ೧

ವಡನೆ ವೆ ತಂದಿಹ ವದಗಿ ಸಾಮಗ್ರಿಯಾ ।
ಕಡಲೆ ತಂಡುಲ
ಗೋದಿ ಕಟ್ಟಿಲ್ಲ ಧಾನ್ಯದೀ ।
ಗುಡ ಶರ್ಕರವ ಮತ್ತೆ ಗೂಡಿಹ ಸಮಸ್ತ ।
ಕೊಡ ಕೊಡ ಘೃತ ತೈಲ ಕುಂಭಿನಿ ಯೊಳಗುಳ್ಳ ।
ವಡವೆಯ ತುಂಬಿಹ
ಉಗ್ರಾಣದಾಲಯಾ । ಸಡಗರದಿಂದಲಿ
ಸ್ವೈಪಾಕ ಮಾಡಲಿ । ತಡೆಯದೆ
ಕೊಡುತಿಹರು ಓಡ್ಯಾಡಲು । ಅಡಿಗಡಿಗೊಬ್ಬೊಬ್ಬರು ಆಜ್ಯವ ।
ವಡಿಯನ ತುಸುಮೀರರು ಸೇವೆಗೆ ।
ಧೃಡ ಭಕ್ತಿಯುಳ್ಳವರು ನಮ್ಮಯ್ಯನಾ ೨

ನಾಕುದಿಕ್ಕಿನವರು ನಂಬಿದ ಶರಣರು ।
ಏಕೋ ಭಾವನೆಯಲಿ ಯಾತ್ರೆಯ
ನೋಡಲಿ । ಸು ಕಾಮ್ಯ ಯುಕ್ತರು
ಸದ್ಬೋಧಾಸಕ್ತರು । ಬೇಕಾದಿ
ದೂರಿಂದ ಬಹಳ ಪಯಣದಿಂದ ।
ಸಾಕುವದೇವ ದೇವರಾ ಸಾರಿ
ಮಹಾದ್ವಾರಾ । ಈ ಕಣ್ಣಲಿ ಕಂಡು ಎಲ್ಲ ಸುಜನ ವಿಂಡು ।
ತಾ ಕೈಯ್ಯ ಮುಗಿಯುತಲೀ ಮನವು ।
ಹಾಕಿ ಸಾಷ್ಟಾಂಗದಲಿ
ಭಕ್ತಿ ವಿವೇಕದಿ ಪಾಡುತ ಈ ಪರಿ ।
ಲೋಕ ನೆರೆಯುತಿರಲಿ ನಮ್ಮಯ್ಯನಾ ೩

ಉದಯದಲೇಳುತ ವರದ ಸದ್ಗುರು ನಾಥಾ ।
ಮೊದಲಿನ ದಿವಸದಿ
ಮಂಗಳ ಸ್ನಾನದಿ । ವಿದಿತ
ಸಂಧ್ಯಾವಂದನಜಪಾನುಷ್ಠಾನಾ ।
ಮುದದಿಂಪ ಮಾಡಿದ ಮ್ಯಾಲ ಪೂಜೆಯದ ।
ವದಗಿ ದೇವ ಪಾಟವಿಟ್ಟು ಸಾದರ ನೀಟ ।
ವಿದಿತ ಬಂಗಾರ ವೆಳಿಯಲಿ ಬರೆದ ಚದುರ ।
ಚಿತ್ರಾಸನಲಿ ಸುತ್ತ ಹಚ್ಚಿದ ಚಿನ್ನ ಪೂವಿನಲಿ
ಝಗ ಝಗ ಅದು
ಹೊಳೆಯುತಿರಲಿರಲಿ ಶಿಖರ ಸಾಲದಲಿ
ನಕ್ಷತ್ರ ಮಾಲಿ ನಮ್ಮಯ್ಯನಾ ೪

ನಡವಿಟ್ಟ ರೌಪ್ಯದ ನೆಲೆ ಸಿಂಹ ಮುಖದ ।
ಪಡದಿಯ ಸೋಂಪಿಲಿ
ಪೀಠ ಪ್ರಭಾವಳಿ । ಬಿಡದೆ ಮೆರೆವ ಛತ್ರ ಬಹು
ಬಹು ವಿಚಿತ್ರ ।
ಯಡ ಬಲ ಪತಾಕೆ ಯಸಳದ ಕೆತ್ತಿಕೆ ।
ವಡನಿಹ ಛಾಮರ ವಿಲಸಿತ ಮನೋಹರ ।
ಸಡಗರದಲಿ ದೇವ ಸಂಪುಟ ಮೆರೆವಾ।
ಇಡಿದಿರೆ ಕಾಂತಿಯಲಿ ಅದರೊಳು ।
ಪೊಡವೀಶ ಕುಳಿತಿರಲಿ ಶ್ರೀಹರಿ ।
ಅಡಿಗಳ ಪೂಜಿಸಲಿ ಸಂಭ್ರಮ ।
ವಡೆಯನ ಏನೆಂದ್ಹೇಳಲಿ ನಮ್ಮಯ್ಯಾನಾ ೫

ಇನ್ನು ತಂತ್ರಸಾರ ಈ ಪೂಜೆವಿಸ್ತಾರ ।
ಸನ್ನುತ ಗಂಗೆಯ ಸಲಿಲವು
ತುಂಬಿಹ । ಸನ್ನಿಧ ಕಲಶವು ಸುಂದರ ಶಂಖವು ।
ಮುನ್ನ ಪಂಚಾಮೃತ
ಮಾಡುತ ಅರ್ಪಿತ । ಧನ್ಯ ಶುದ್ಧೋದಕ
ದಾಗಲು ಅಭಿಷೇಕ ।

ಮನ್ನಡೆ ವಸ್ತ್ರವ ಮಂಡಿಸಿ ಹರುಷದಿ ।
ಪನ್ನೀರವನು ದಳದಾ
ಕೇಶರ । ಚೆನ್ನ ಕಸ್ತೂರಿ ವೆರೆದಾ
ಸುಗಂಧವನ್ನು ಅರ್ಪಿಸಿ ಚಲ್ವದಾ
ಸಾಲಾದಾ । ಘನ್ನ ದೀಪದೆಡೆ ಬಲದಾ ನಮ್ಮಯ್ಯನಾ ೬

ಮೆರೆವ ತುಳಿಸಿ ಜಾಜಿ ಮರಗು ಮಲ್ಲಿಗೆ ಸೂಜಿ ।
ಪರಿಮಳ ದಿಂಡಿಗೆ
ಪಾಡಾದಾ ಸಂಪಿಗೆ । ಪರಿ ಪರಿ
ಪುಷ್ಪದಾ ಪಸರಿಕೆ ಬಹುಳವಾ ।
ಸರಸ ದುಂಡಿನ ಹಾರಾ ಸರಮಾಲೆ ವಿಸ್ತಾರಾ ।
ತರುವಾರಾ ಧೂ
ಪಾರತಿಯ ದಶಾಂಗದ ಸಾರಾ । ಇರುವುದು
ಬಲವೆಡಾ ಊದುಬತ್ತಿಯ ಗಿಡಾ ।
ನೆರೆ ಏಕಾರತಿಯಾಗಲಿ ನೈವೇದ್ಯ ಹರಿವಾಣವನು । ಬರಲಿ
ಎಲ್ಲರೂ ಹೊರಗೆ ತಾನಿಂದರಲಿ ಉಣುಸುದು ।
ಹರಿಗೆ ಪ್ರತ್ಯಕ್ಷದಲೀ ನಮ್ಮಯ್ಯನಾ ೭

ಸ್ವಾದೋಕದಿ ನಾಗ ವಲ್ಲಿ ದಳವ ಯೋಗ್ಯ ।
ವಾದಾ ಪೂಗೀ ಫಲಾ
ವಿನಿತಿತ್ತು ತಾಂಬೋಲಾ ।
ಸಾದರ ಹರಿವಾಣ ಆರತಿ ಪೂರಣಾ ।
ಆನಿ ಪದಗಳಿಂದ ಅರ್ತು ಬಳಲಿ ।
ಛಂದ ಭೇದಿಸಿ ಘನತಾಳಾ ಬಲು
ಧ್ವನಿ ಕಂಸಾಳಾ । ನಾದ ಜಾಂಗಟೆ
ಶಂಖ ನಾಮ ಘೋಷದಿತಿಂತ ।
ರಾದವರು ಪಾಡಲೀ ನೀರಾಂಜನ । ಸಾದಿಪ ಸಮಯದಲಿ
ವೈಕುಂಠ । ಮೇದಿನಿಯೊಳು ತೋರುತಲಿ ಪಾರಣೆ । ಆದವು.
ಕಣ್ಣೆನಲಿ ನಮ್ಮಯ್ಯನಾ ೮

ತರುವಾಯಾ ಮಹಾಗುರು ತಂದಿಗೆ ಶರಣರು ।
ಮೆರೆವ ಷೋಡಷದಿಂದ
ಮಾಡಿ ಪೂಜೆಯ ಛಂದ ।
ಹರಿತೀರ್ಥಕೊಳ್ಳಲು ಹರುಷದಿ ಜನಗಳು ।
ಪೊರಗೆ ಸತ್ಕಾರವ ಪಡೆದಿಹ ಭಗದೇವ
ಕರುವೇದ ಘೋಷ ಮಾಡು
ತಾ ಭಿಕ್ಷಾವಾ । ನೆರೆ ಸಕಲ ಯಡೆ
ಮಾಡಿ ಕುಳ್ಳಿರೆ । ಪರಮಾನ್ನ
ಭಕ್ಷಗಳು ಶಾಲ್ಯೋದನ ।
ಪರಿ ಪರಿ ಶಾಕಗಳು ಸೂಪಘೃತ ।
ನೆರೆ ಪಾಲ್ಮೊಸರುಗಳು ಅಲ್ಲಿದಲ್ಲಿ ।
ಗಿರಿಸಿಹ ದೀಪಗಳು ನಮ್ಮಯ್ಯನಾ ೯

ಬೇಡೂ ಪದಾರ್ಥವಾ ಬಡೆಸುವರು ಬಹಳವ ।
ಪ್ರೌಢದಿ ಹರಿ ನಾಮಾ
ಪ್ರತಿ ಶ್ಲೋಕಗಳು ನೇಮಾ ।
ಆಡಲೇನದು ತೃಪ್ತಿ ಆಯಿತು ಉಂಡು ।
ರೂಢಿಗೆ ತಾಂಬೂಲ ರನ್ನ ದಕ್ಷಿಣೆಗಳು ।
ನೀಡೆ ವೇದೋಕ್ತದ ನುಡಿ
ಆಶೀರ್ವಾದ । ಮಾಡುತ ಬ್ರಾಹ್ಮರು ಮನೆಗೆ ಹೋಗುವರು ।
ಪಾಡುವ ಹರಿದಾಸರು ದಂಡೆಗೆ ತಾಳ ।
ಗಾಡ ಮದ್ದಲೆ ಸದರು
ಸಭೆಯೊಳುಗೂಡಿ । ಒಡೆಯನಿದಿರು ಹರಿಯ ಕೊಂಡಾಡಿ
ಆರತಿಯತ್ತೀರ ನಮ್ಮಯ್ಯನಾ ೧೦

ಒಂಬತ್ತು ದಿನದಿ ಒಂದೇ ಈ ಪರಿಯಲಿ ।
ಮುಂಚಿಲಿ ನಡೆಯಲು
ಮಹಾನೌಮಿ ಬರಲು । ಅಂಬಾ ಸರಸ್ವತಿ
ಅರ್ಚನೆಯಾ ಅರ್ತಿ ।

ದೆಂಬುದು ವಿಜಯಾ ದಶಮಿಯಾ ಉಚ್ರಾಯಾ ।
ಸಂಭ್ರಮದಲಿ ನೋಡಿ
ಸದ್ಗತಿ ಸೂರ್‍ಯಾಡಿ । ಕೊಂಬರು ಸ್ವಸ್ಥಲ ಕುರಿತು ಆಜ್ಞೆಗಳ ।
ಇಂದಿಲ್ಲ ಆನಂದದೀ ಈ ಮಹಿ ಮಾಡಂಬರೆನ್ನ ಮುಖದಿ
ನುಡಿಸಿದ । ಶಂಭು ಮಹಿಪತಿ ದಯದಿ ನಂದನ । ಬೊಂಬಿ
ಸೂತ್ರ ದಂದದಿ ನಮ್ಮಯ್ಯನಾ ೧೧

## ೫೧೩

ನಂಬಿ ನಡಿಯಿರೋ । ನಂಬಿ ನಡಿಯಿರೋ ।
ಗುರುಪಾದವಾ
ನಡಿಯಿರೋ ನಂಬಿ ನಡಿಯಿರೋ । ನೇಮದಲಿ ಅತಿ ।
ಪ್ರೇಮದಲಿ ಪ

ಗುರುವೇ ಗರಿಯಂದರಿಯದೆ ಮರೆದು ।
ತಿರುಗುವರೇ ನೀ ಮರಗುವರೇ ।
ತರಣೋಪಾಯದ ಸಾಧನ ಪಡೆಯದೆ ।
ಇಹದೇನೋ ಗುಣವಹುದೇನೋ ।
ಗುರುವಿಂದಲಿ ಜನರಿಗೆ ಅನ್ಯರು ।
ತಾರಕರಿಲ್ಲ ಪೋಷಕರಿಲ್ಲಾ ।
ತರಣಿಯ ಹೊರತಾ ಚರಣಿಯ ದಿನ ನಡೆ
ಸುವರುಂಟೆ ಬೆಳಗುವರುಂಟೆ ೧

ಪೊಡವಿಲಿ ನಾನಾ ಜನ್ಮವ ತಾಳಿ ।
ಬಾಳಿ ತೊಳಲಿ ಘನ ಬಳಲಿ ।
ಕಡೆಯಲಿ ಪುಣ್ಯಾಂಶದಿ ನರ ಶರೀರದಿ ।
ಬಂದೀಗ ನೀ ನಿಂದೀಗ ।
ಒಡನೆ ಮುಂದಣ ಗತಿಯ ವಿಚಾರಿಸಿ ।
ಹಾದಿಯನು ತಿಳಿ ಭೇದಿಯನು ।

ತಡೆಯದೆ ಭಾವದಿ ಸದ್ಗುರುವಿಗೆ ಹೋಗು ।
ಶರಣವನು ಪಿಡಿ ಚರಣವನು ೨

ಗುರುವೆ ನಿರ್ಜರ ತರುವೆ ಸರ್ವರ ।
ನಿಜದರುವೆ ಕರುಣವಗರವೇ ।
ಭರದಲಿ ಈ ಪರಿಯಿಂದಲಿ ಸ್ತುತಿಗಳ ।
ಪಾಡುತಲೀ ನಲಿದಾಡುತಲಿ ।
ಕರದಂಡಯುಗಳ ನೀಡಿ ತನುವ ನೀ ।
ಡ್ಯಾಡಿ ನಮನವನೇ ಮಾಡಿ ।
ವರಗಳ ಬೇಡಿ ಪ್ರೇಮವ ಕೂಡಿ ।
ಸ್ವಾನಂದದ ಸುಖ ಸೂರ‍್ಯಾಡಿ । ೩

ಈ ಮಾರ್ಗವನೆ ತ್ಯಜಿಸಿ ಕಾಳಿ ।
ಮೌಳಿ ಉಚ್ಛಿಷ್ಟ ಚಾಂಡಾಳಿ ।
ತಾಮಸ ಶಕ್ತಿ ಭೂತ ಪ್ರೇತಗ ।
ಳೆಂಬೋಪಾಸನ ಧ್ಯಾಸನಾ ।
ಕಾಮನವಿಡಿದು ವೇದ ವಿರುದ್ಧದ ।
ಹಾದಿಲಿ ನಡೆವರೇ ನೋಡುವರೇ ।
ಆ ಮಹಾ ಅಮೃತ ಕೊಟ್ಟು ಗಂಜಿಯ ।
ಕೊಂಡಂತಾಯಿತು ಗುಣಹೇತು ೪

ಕಾಶೀ ಗಾಮೇಶ್ವರ ಯಾತ್ರೆಯ ಭ್ರಾಮ ।
ತಿಗಳ್ಯಾಕೆ ಚಿಂತಿಗಳ್ಯಾಕೆ ।
ಭೂಸುರ ಪುಂಡರೀಕನ ಭಕ್ತಿಯಲಿ ।
ಆಚರಿಯಾ ನೀ ಕೇಳರಿಯಾ ।
ವಾಸವಾದನು ಅವನಿದ್ದೆಡೆಯಲಿ ।
ಗೋವಿಂದಾ ಶ್ರೀ ಮುಕ್ಕುಂದಾ ।
ಆ ಸದ್ಗುರು ಭಜನೆಯ ದೊರಕೊಂಬುದು ।
ಇಹಪರವು ನಿಜ ಸುಖದರವು ೫

ಲೇಸಾಭಕ್ತಿಯ ಮೋಡಿಗಳಿಲ್ಲದೆ ।
ಮನದೊಳಗೆ ಈ ಜನದೊಳಗೆ ।
ಆ ಸಂತರ ನಡೆನುಡಿಗಳ ಕಲಿತು ।
ಡಂಭವ ದೋರುತ ಎರೆಯುತ ।
ಕಾಷಾಯಾಂಬರ ಮಾಡಿ ವೇಷವ ।
ತೋರುವುದಲ್ಲಾ ಗುಣಸಲ್ಲಾ ।
ಈ ಸಬಕಾರವ ಬಿಟ್ಟು ಕ್ಯಾವಿಯ ।
ಕಿಡಿಸುವರೇ ನೀ ಧರಿಸುವರೇ ೬

ನಾನಾ ಸಾಧನದಿಂದಲಿ ಯೋಗದ ।
ವಾರ್ತೆಗಳಾ ಮನೆವಾರ್ತೆಗಳಾ ।
ಮೌನವವಿಡಿದು ವಾಯು ವಿರೋಧಿಸಿ ।
ಪ್ರಾಣವನು ಅಪಾನವನು ।
ತಾನಿದ್ದಾಸನ ಸಹಿತದಿ ಗಗನಕೆ ।
ಹಾರಿಸಿದೀ ನೀ ತೋರಿಸಿದೀ ।
ಏನಾದರೂ ಏನಿಲ್ಲಾ ಸಮ್ಯಕ್ । ಜ್ಞಾನವಾಗದೆ ಸಿಲ್ಕುವದೀ ೭

ಮನಸಿನ ಹಂಬಲ ಸಕಲವ ಬಿಟ್ಟು
ಸೌಮ್ಯದಲಿ ನಿಷ್ಕಾಮ್ಯದಲಿ ।
ಘನಗುರು ಶ್ರೀಪಾದದಲಿ ವಿಶ್ವಾ ।
ಸವನಿಟ್ಟು ರತಿಗಳನಿಟ್ಟು ।
ತನುಮನ ಧನವನು ಅರ್ಪಿಸಿ ವಂಚನೆ ।
ನಿಲದ್ಹಾಂಗ ಚಲಿಸದಲ್ಹಾಂಗ ।
ಅನುದಿನದಲೀಪರಿ ಬಾಳುತಲಿರು
ಗುರುವಾಜ್ಞೆಯಲಿ ಅಭಿಜ್ಞೆಯಲಿ ೮

ಈ ನಿಜಬೋಧಾಷ್ಟಕವನು ಸ್ಮರಿಸಿ ।
ಭಕ್ತಿಯಲಿ ನಿಜವೃತ್ತಿಯಲಿ ।

ಸಾನುರಾಗದಿ ನಂದನ ಪ್ರಭುಗುರು ।
ಮಹೀಪತಿಯಾ ಸುಚರಿತೆಯಾ ।
ಸ್ವಾನಂದದ ನಿಜದಯವನು
ಪಡಕೊಂಡವರನವರಿತಾ ಸುಖಭರಿತಾ ।
ನೀನಾಗಿರುತಲಿ ಭವ ಶರಧಿಯ ದಾಟುವಿ
ಸುಗಮದಲಿ ನೀ ಬೇಗದಲಿ ೯

## ೫೧೪

ಅಲ್ಲೇನಿಲ್ಲೇನು ಮತ್ತಿಲ್ಲೇನು ಪ

ಗುರುವಿನಂಘ್ರಿಯ ಕಂಡು ಗುರುತವ ಕೇಳದೇ ।
ಅಲ್ಲೇ ನಿಲ್ಲೇನು ।
ಹರಿರೂಪಗಾಣದೇ ಡಂಭದಿ ತಿರುಗಿದ । ಅಲ್ಲೇ ನಿಲ್ಲೇನು ೧

ಕರ್ಮಧರ್ಮವ ಮಾಡಿ ಸ್ವರ್ಗವ ಪಡೆದನು । ಅಲ್ಲೇ ನಿಲ್ಲೇನು।
ಮರ್ಮವ ಗಾಣದ ವಿಷಯದ ಸಂಭ್ರಮ । ಅಲ್ಲೇ ನಿಲ್ಲೇನು ೨

ಮನೆವಾರ್ತೆಯ ಬಿಟ್ಟು ಮಠದಾಶೆ ಹಿಡಿದನು ।
ಅಲ್ಲೇನಿಲ್ಲೇನು ।
ವನಿತೆ ಮಕ್ಕಳ ಬಿಟ್ಟು ಶಿಷ್ಯರ ನೆರಹಿದ । ಅಲ್ಲೇ ನಿಲ್ಲೇನು ೩

ಎಲ್ಲ ಶಾಸ್ತ್ರವನೋದಿ ಪ್ರಾಕೃತಹಳಿದನು । ಅಲ್ಲೇ ನಿಲ್ಲೇನು ।
ಬಲ್ಲವ ನಾನೆಂಬ ಗರ್ವವು ಸೇರಿತು । ಅಲ್ಲೇ ನಿಲ್ಲೇನು ೪

ಮನದಲ್ಲಿ ನೆನೆವಂಗೆ ಮನೆಯೇನು ಮಠವೇನು ।
ಅಲ್ಲೇ ನಿಲ್ಲೇನು ।
ಮನದಲೆಚ್ಚರವಿಲ್ಲ ಕವಾಟಹೊಕ್ಕನು ಅಲ್ಲೇ ನಿಲ್ಲೇನು ೫

ಮಹಿಪತಿ ನಂದನ ಸಾರಿದ ಸ್ವಹಿತ ಅಲ್ಲೇ ನಿಲ್ಲೇನು ।
ಶ್ರೀಹರಿ ನಾಮದ ನಂಬುಗೆ ಇರಬೇಕು । ಅಲ್ಲೇ ನಿಲ್ಲೇನು ೬

## ೫೧೫

ಅವನೇ ನಿಜಯೋಗಿ । ವಿರಾಗಿ ।
ಶಿವಸುಖ ಕಂಡಿಹ ಭೋಗಿ ೧

ದಾವನ ನೋಟದಲಿ । ಸಮ ವಿಷಮಾ ।
ಭಾವನೆಗಾಯಿತು ಸೀಮಾ ೨

ಮಾಯಾ ಕಲ್ಪಿತದಾ । ಜಗಮರೆತಾ ।
ನ್ಯಾಯದಿ ಚಿದ್ಘನವರಿತಾ ೩

ಮಂದಗೆಡನು ಚರಸೀ । ತಾನಾಗಿ ।
ಬಂದದನುಂಬನು ತ್ಯಾಗಿ ೪

ಬಲ್ಲವಿಕಿಲಿ ಬಿಗಿಯಾ । ದಾವನು ।
ಎಲ್ಲರಿಗ್ಯಾಗಿಹ ಹರಿಪ್ರಿಯನು ೫

ಮಹಿಪತಿ ಸುತ ಪ್ರಿಯನಾ । ತಿಳಿವಿಕೆಯಾ ।
ಸೋಹ್ಯವ ತಿಳಿದನು ನೆಲಿಯಾ ೫

## ೫೧೬

ಅವನೆವೆ ಶರಣಾ ಪ

ಗುರುಗರಡಿಯ ಮನಿಯೊಳು ಬೆರೆದು ।
ಗುರುದಾಸರ ಸಂಗವ ಬಲಿದು ।
ಅರಿತಾವಿನಾ ಅಲ್ಲಿಯ ಕಳೆಗಳ ತಿಳಿದು ೧

ಹರಿದಾಡುವ ಚಂಚಲ ನೀಗಿ ।
ಗುರುಸೇವೆಯಲಿ ತತ್ಪರನಾಗಿ ।
ಕರುಣವ ಬೀರ್ವನು ಅರಿಸಖರೊಳಗಾಗಿ ೨

ಆರಿಗೆ ಹೊಲ್ಲೆಯ ತಾ ನುಡಿಯಾ ।
ಆರಿಂದು ನಿಷ್ಠುರ ಪಡಿಯಾ ।
ಧರಿಯೊಳು ಸನ್ಮತ ಮಾರ್ಗದಿ ತಾ ನಡಿಯಾ ೩

ದೋರಗಡುದೆ ಬಲ್ಲವಿಕೆಯನು ।
ಪರರವಗುಣವನು ಅರಿಸನು ।
ನೀರು ಹಾಲಿನ ಸಖ್ಯಕ ಪರಿಲಿಹನು ೪

ತನುಧನ ಮದದೊಳು ಬೆರಿತಿರದೇ
ಘನದೆಚ್ಚರಿಕೆಯ ಮರೆದಿರದೇ
ನೆನೆವನು ಗುರುಮಹಿಪತಿಸ್ವಾಮಿಯ ಬಿಡದೇ ೫

## ೫೧೭

ಅವಗೆಲ್ಲಿಹುದೋ ನಿಜ ಮುಕ್ತಿ ।
ದಾವಗಿಲ್ಲವೋ ಗುರುಪಾದ ಭಕ್ತಿ ಪ

ತಂದಿ ತಾಯಿ ಗುರು ಬಂಧು ಬಳಗಾ ।
ಎಂದು ಹಂಬಲಿಡದೆ ಮನಲೀಗಾ ೧

ಗುರು ಕಂಡಾಗಳೆವೆ ಶರಣೆಂಬಾ ।
ತಿರುಗಿ ನೋಡಲು ಮರವನು ಡೊಂಬಾ ೨

ಹೊರಗ ದೋರುವ ಡೊಂಬ ಅನೇಕ ।
ಗುರುಸೇವೆಗೆ ಹೋದನು ಹೋಕಾ ೩

ಪೂಜೆ ಸರ್ವೋಪಚಾರದಿ ಮಾಡಿ ।
ತ್ಯಾಜ ಪಡಿಯನು ಗುರುದಯ ಕೂಡಿ ೪

ಪರಮ ಗತಿಗಿದೇ ಕಾರಣವೆಂದು ।
ಗುರುಮಹಿಪತಿ ಬೋಧಿಸಿದನಿಂದು ೫

# ೫೧೮

ಇದುವೆ ಕೈವಲ್ಯವು । ಸದ್ಗುರುವೇ ।
ನಿಮ್ಮಿಂದವೆ ಕೈವಲ್ಯವು ।
ನಂದನ ಕಂದ ಮುಕುಂದನ ।
ಛಂದದಿ ನೆನೆವುತಾನಂದದಲಿಪ್ಪರಾ ಪ

ಭಂಗ ಬಡುವಾ ಭವದಾ ।
ಚಿರಳಿಯೆನಿಸ್ಸಂಗ ಶಸ್ತ್ರವ ವಿಡಿದಾ ।
ಹಂಗವಳಿದು ದೇಹದಾ ಪ್ರಪಂಚದ
ರಂಗನೊಳಗ ಬೆರೆದಾ ।
ಹಿಂಗದೆ ಸಂತರ ಸಂಗದಿ ಅನುದಿನ ।
ಮಂಗಳ ಹರಿಚರಿತಂಗಳ ಕೇಳುವಗಿಂದೇ ೧

ಕಂತು ಪಿತನ ಧ್ಯಾಯಿಸೀ ಮನಸಿನಿಂದಾ ।
ಅಂತರಂಗದಿಪೂಜಿಸೀ ।
ಶಾಂತಿಯ ಗುಣ ಧರಿಸೀ ।
ತಂತು ವಿಡಿದು ನಿಶ್ಚಿಂತದಿ ಇಹಪರ
ಭ್ರಾಂತಿಯಳಿದು ವಿಶ್ರಾಂತಿಯ ಪಡೆದವಗಿದೇ ೨

ಮುಂದಾಗುವ ಮುಕ್ತಿಯನು ಗುರುದಯದಿ ।
ಇಂದೇಕಾಣುತ ಧನ್ಯನು ।
ಸಂದೇಹ ವಳಿದನು ತುರ್ಯಾತೀತಾ ।
ವಂದಿಸಿ ಭಾವದಿ ತಂದೆ ಮಹೀಪತಿ ।
ದ್ವಂದ್ವ ಚರಣವನು
ಹೊಂದಿದ ನಂದನಗಿದೇ ೩

## ೫೧೯

ಇದು ನಿಜ ಮತವೇ ನಿಜ ಮತವೇ
ಆವನ ಪದ ಜಲ ಮೌಳಿಯಲ್ಲಿಟ್ಟ ಮಹ ಪ

ದೇವನು ಹರಿಸಮನೆಂತು
ಆವನಿಚ್ಛೆಯ ಪರಿ ಜಗದೊಳಾಡುವ ಶಕ್ತಿ ೧

ಭುವನೇಶ ಸರಿಯೆ ಹೇಳೆಂತು
ಅವನ ಗ್ರಂಥದ ಲೇಖಕ ಗಣಪನು ೨

ಕಾವನಯ್ಯನ ಸಮನೆಂತು
ಅವನ ತೇಜದಿ ಬೆಳಗುವ ದಿನಪನು
ಗೋವಿಂದ ಸರಿಯನೆಂತು ೩

ಗುರು ಮಹಿಪತಿ ಪ್ರಭು ಹರಿಪರವೆನ್ನದ
ನರರಿಗೆ ಮುಕ್ತಿಯಹದೆಂತು ೪

## ೫೨೦

ಇದೆ ಪರಿಗುರು ನೋಡಿ ನರನಲ್ಲಾ ।
ಸದ ಮಲ ಘನ ಕೈವಲ್ಯಾ ಪ

ಸುರ ತರು ಮರದೊಳಗ ಸರಿಯಹುದೇ ।
ಪರಸವು ಪಾಷಾಣಹುದೇ ೧

ಸುರಭಿಯು ಆವಿನೊಳು ಸಮವಲ್ಲಾ ।
ಸುರನದಿ ಸಲಿಲದೊಳಲ್ಲಾ ೨

ಧರಿಯೊಳು ದೋರುತಿಹಾ ಕೃಷ್ಣನ್ನಾ ।
ಪೊರೆವನು ಮಹಿಪತಿ ರನ್ನಾ ೩

# ೫೨೧

ಇನ್ನಾದರೆಚ್ಚರೇಳಿನ್ನು ಸಾಲದೆನಿದ್ರೆ ಬನ್ನ
ಬಡಿಸುವುದು:ಖನೀಗುವಂತೆ ಸಿರಿ
ಪನ್ನಗಾದ್ರೀ ಶಪದವನ್ನೆನೆದು ಸುಖಿಯಾಗಿ
ಮನ್ನಣೆಯ ಪಡಿಯ ಕಂಡ್ಯಾಮನವೆ ಪ

ಘನ್ನವಿದ್ಯದಮಬ್ಬಿಲಿನ್ನ ಖಳಜಗದ ಜೀ
ವನ್ನ ಮಲಗಿದೆರೊಳಗ ಮುನ್ನ ಮಾಡಿದ ಸುಕೃತ
ಪುಣ್ಯ ತಂಗಾಳಿ ಸಂಪನ್ನ ಗುರು ಕರುಣೋದಯ
ದುನ್ನತೆಯ ಬೆಳಗು ಕಂಡು
ಸನ್ನುತುದಯರಾಗಸ್ತವನ್ನು ಪಡುತಜ್ಞಾನ
ಚನ್ನ ನದಿಯೊಳುಮಿಂದು ತನ್ನ ಸಂಚಿತದ ತ್ರೈಯ
ರ್ಘ್ಯನ್ನೆರದು ಮೆರುವುತಿಹ ನಿನ್ನ ಸಿರಿಕರ ನೋಡು
ಇನ್ನು ನಾಚಿಕೆ ಬಾರದೇ ೧

ಬಂದು ನರದೇಹದಲಿ ನಿಂದಾಗ್ರ ಜನ್ಮದಲಿ
ಹೊಂದುಪಥವನೆ ಬಿಟ್ಟು ಛಂದ ಹೊಲಬದಿ ಕೆಟ್ಟು
ಮಂದಮತ ತನವೆರಿಸಿ ಮಂದಿಯೊಳಗಲ್ಲೆನಿಸಿ
ನೊಂದು ಪರಿ ಪರಿಯ ಬಯಸೀ
ಬೆಂದ ವಡಲನೆ ಹೊರೆದಿ ಕುಂದದಾಟಕೆ ಬೆರೆದಿ
ತಂದಾಯುಷವ ಹೊತ್ತು ಇರದಯೇರಿತು ಬೆರೆತು
ಮುಂದ ನಿನ್ನಯ ಗತಿಯ ಯಂದು ಘಳಿಸುವೆ ಸ್ಥಿತಿಯಾ
ಇಂದಿರೇಶನ ವಲುಮೆಯಾ ೨

ಮರಹು ಮುಸುಕವ ತೆಗೆದು ಅರಹುನಯನವ ತೆರೆದು
ಪರಮ ಭಾವನೆ ಬಲಿದು ವರ ಭಕುತಿಗಳ ಜಡಿದು
ತರಣೋಪಾಯವ ಕೂಡು ಹರಿಯ ಸೇವೆಯ ಮಾಡು

ನೆರೆ ಸಾಧು ಸಂಗ ಬೇಡು
ಸುರಸ ಬೋಧವ ಕೇಳು ಸರಕುಮಾತನೆ ಕೀಳು
ಧರಿಯೊಳಗ ಸಾರ್ಥಕಲಿ ಪರಿಬಾಳುತಲಿರಲಿ
ಗುರು ಮಹಿಪತಿಸ್ವಾಮಿ ಹೊರೆವದಯದಲಿ ನೇಮಿ
ಶರಣ ಜನರಂತರ್ಯಾಮೀ ೩

## ೫೨೨

ಇನ್ನೇನು ನೋಡುವಿ ನೆಲಿಯಾ । ಭವ ।
ಬನ್ನ ಬಿಡಿಸಿ ಕಾಯೋ ಅಜಭವರಯ್ಯ ಪ

ಆಶೆಯೆಂಬ ನದಿಯಲ್ಲಿ । ಘನ ।
ಸೂಸುವ ಮನೋರಥವ ಸೆಳವಿನಲಿ ।
ವಾಸನೆ ತೆರೆಗಳಿ ಬರಲಿ । ಬಲು ।
ಘಾಸಿಯಾಗುವೆ ಸಿಕ್ಕಿ ಮೋಹ ಸುಳಿಯಲಿ ೧

ಉಲಿವ ಕುತರ್ಕ ಪಕ್ಷಿಗಳು । ನುಂಗ ।
ಲೆಳವ ಮೊಸಳೆ ನಕ್ರ ಕಾಮಕ್ರೋಧಗಳು ।
ಬಲಿದು ವಿವೇಕ ಧಡಿಗಳು । ಕೋರೆ ।
ಯಲಿ ಬೀಳೆ ಧೃತಿ ಶಾಂತಿಯೆಂಬಾ ವೃಕ್ಷಗಳು ೨

ಇಂತು ಹೆರಿಗೆ ಬಿದ್ದೆ ಬಂದು । ಸಿರಿ ।
ಕಾಂತ ನಿನ್ನಯ ನಾಮ ಹಡಗ ತಂದು ।
ಪಂಥಗಾಣಿಸೋ ಗತಿಗಿಂದು । ದಯ ।
ವಂತ ಗುರು ಮಹಿಪತಿ ಪ್ರಭು ದೀನ ಬಂಧು ೩

## ೫೨೩

ಎಚ್ಚರ ಹಿಡಿ ಮನವೇ ।
ನಿಚ್ಚದಿ ಮೆಚ್ಚಿನ ಅಚ್ಚುತನಂಘ್ರಿ ಪ

ಹಾಡುತಾ ನೋಡುತಾ ನೀಡದೊಳಾಡುತಾ
ನಡೆ ನುಡಿಯೊಳು ಬಿಡ ದಡಿ ಗಡಿಗೊಮ್ಮೆ ೧

ಹೇಳುತ ಕೇಳುತ ಮೇಳದಿ ಬಾಳುತ ।
ಕಳವಳದಳುಕಿನ ಡಳಮಳದೊಳಗೆ ೨

ಬಂದದ ಭಂದವಿಂದೇ ಹೊಂದು ಮುಕುಂದನೆಂದು ।
ತಂದೆ ಮಹೀಪತಿ ಕಂದಗ ಬೋಧಿಸಿದ ೩

## ೫೨೪

ಎಂಥಾ ದಯಾ ನಿಧಿಯೇ । ಸದ್ಗುರು ।
ಎಂಥಾ ದಯಾ ನಿಧಿಯೇ ।
ಸಂತತ ಭಕ್ತಿ ವಿಶ್ರಾಂತಿಯ ದೋರಿದ ಪ

ಕಾಣದಾ ಕಂಗಳಿಗೇ । ನೋಡಮ್ಮಾ ।
ಜ್ಞಾನಾಂಜ ನುಡಿದಾ ।
ಪ್ರಾಣಕ ಗೋಚರ ವಾಗಿಹ ನಿಜಘನ ।
ಕಾಣಿಸಿ ಇದರ್ಧಿಡಿದಾ ೧

ಆಲಿಸದಿಹ ಶಬ್ದವಾ । ಕಿವಿಯೊಳು ।
ಮೂಲ ಮಂತ್ರದಳುದಿಂದಾ ।
ಹೇಳಲಿನ್ನೇನದ ಸ್ವಾನುಭವದ ಘೋಷಾ ।
ಘೇಳಗುಡಿಸಿ ನೋಡಿದಾ ೨

ಮಂದ ಮತಿಯ ಕರೆದು । ಶುಭಕರ ।
ಮುಂದತಿಯೊಳು ನೀಡಿದಾ ।
ತಂದೆ ಮಹಿಪತಿ ಕಂದನೆನಿಸಿ ।
ತನ್ನ ಇಂದು ಧನ್ಯನ ಮಾಡಿದಾ ೩



## ೫೨೫

ಎನ್ನಮನವ ನಿಲಿಸೋ ಇಂದಿರೆ ಪತಿ
ಭಂಗಬಡುವ ವಿಷಯಂಗಳಿಗೆರಗದೇ
ರಂಗ ನಿನ್ನಯ ಮಂಗಳಂಗುಟರ್ಚಿಸುವಂತೆ ೧

ಉದರ ಪೋಷಣೆಗಾಗಿ ಸದೆಬಡಿಗನಾಗದೇ
ಸದಮಲ ನಿನ್ನೊಳಿಗದವನಾಗುಳಿವಂತೆ ೨

ಶರೀರ ಸಂಬಂಧಿಗಳಲ್ಲಿರುವ ಪ್ರೇಮವ ತಂದು
ಗುರು ಮಹಿಪತಿ ಪ್ರಭು ಸ್ಮರಣೆಯೊಳಿರುವಂತೆ ೩

## ೫೨೬

ಏನಾದರೇನು ಗುರು ಪಡದನಕಾ ।
ತಾನೊಲಿಯನು ಹರಿ ಕಾವನ ಜನಕಾ ಪ

ಪರಿಪರಿಸಾಧನದಲಿ ಬಳಲುವರೆ ।
ಪರಸ ಮುಟ್ಟದೆ ಲೋಹವಾಗುವದೇ ಕನಕಾ ೧

ಪತಿತೋದ್ಧಾರಗುರು ಸ್ವಸುಖದಾನಿ ।
ವ್ರತ ತಪಸಿದ್ಧಿಯ ಬಹು ಸುಖ ಕ್ಷಣಿಕಾ ೨

ಗುರು ಮಹಿಪತಿಪ್ರಭು ಜ್ಞಾನಾಂಜ ನಿಡದೇ ।
ಧರೆಯೊಳಾಹನೇ ನರ ಚಿದ್ಘನ ಧನಿಕಾ ೩

## ೫೨೭

ಎನ್ನೊಳು ನ್ಯೂನವಾರಿಸದೇ ಸಲಹಯ್ಯಾ ಪ

ಕಾಮಕ್ರೋಧ ಸಂಗವ ಮಾಡೀ ।
ತಾಮಸ ಲೋಭದಿ ಮೋಹವ ಕೂಡಿ ।
ತಾಮದ ಮತ್ಸರದಲಿ ಬೆರೆದಾಡೀ ।
ನೇಮದಿಗೆಟ್ಟೆ ವೃಥಾಯಕ ೧

ವಿಷಯೇಂದ್ರಿಯ ಸುಖ ವಿಷಯೆಂದರಿಯದೆ ।
ವಿಷಯದಿ ನಿಸಿದಿನಗಳೆದೆನು ಹರಿಯೇ ।
ಕುಶಲದ ಕರ್ಮದ ದಾರಿಯ ವಿಡಿಯೆ ।
ಘಸಣಿಗೆ ಬಿದ್ದೆನು ಭವದಿಂದ ೨

ತಂದೆ ಮಹಿಪತಿ ನಂದನ ಪ್ರಾಣಾ ।
ಮುದದಿ ಕೈಯನು ಪಿಡಿಯಲೋ ಪೂರ್ಣಾ ।
ಛಂದದಿ ತೋರಿಸಿ ನಾಮದ ಖೂನಾ ।
ಇಂದಿಗೆ ಧನ್ಯನ ಮಾಡು ೩

## ೫೨೮

ಎಲ್ಲಿ ಶ್ರೀ ಗುರುವಿನ ದಯದೊಲವಿಹುದು ।
ಅಲ್ಲಿ ದುರಿತ ಭಯ ಮುಟ್ಟ ಲರಿಯದು ೧

ದಿವಸಾಧಿಪನಾ ಮಂಡಲವನು ಸಾರಿಹಗ ।
ಜವದಿ ಕತ್ತಲೆಯು ಮುಸುಕುವದೇನವಗ ೨

ಸಕಲ ಗಜಗಳು ಮುದದಲಿ ಒಂದಾಗಿ ।
ಶಕ್ತಿ ಸಿಂಹನ ಮುಂದೆ ನಿಲ್ಲುವವೇ ಪೋಗಿ ೩

ಪ್ರತ್ಯಕ್ಷದಲಿ ಅನಳನಿಹು ಸ್ಥಳದಲಿ ।
ಮತ್ತೆದೋರುದೇ ಮುಖ ಹಿಮವು ಇದಿರಲಿ ೪

ಕಂದನ ಪ್ರಿಯ ಮಹಿಪತಿಯ । ಸ್ಮರಿಸದೇ ।
ಅಂಧಕನಂತೆ ಬಾಳುತಿಹಾವರಿಗಲ್ಲದೇ ೫

## ೫೨

ಏನಾರಿಸುವಿ ಹರಿಯೇ ಎನ್ನವಗುಣಾ
ಅನಂತಾನಂತ ತಪ್ಪು ಮಾಡಿದ ಪಾಮರೊಳೇನಾ ಪ

ಉದಯ ಉದ್ಯೋಗನೆನುವೆ ಮಧ್ಯಾಹ್ನಕ
ಕ್ಷುಧೆ ತೃಷೆಯಲ್ಲಿ ದಣಿವೆ ಇರುಳಿಗಿನ್ನು
ವದಗಿ ನಿದ್ರೆ ಯನುವೆ
ಇದರೊಳು ನಿನ್ನ ನಾಮನೆನೆಯದೆ ದಿನಗಳೆದೇನಾ ೧

ನಿನ್ನ ಕಥೆಯಾ ಕೇಳದೇ ಮಂಗಳಂಗುಟ
ಕಣ್ಣಿನೊಳಿಟ್ಟು ನೋಡದೇ ಸರ್ವಾಂಗದಿ
ಚೆನ್ನಾಗಿ ಮಾಡದೇ
ಎನ್ನ ಕಾಯವು ಸತಿಸುತರಿಗೆ ಮಾರಿದೇನಾ ೨

ಹರಿ ಭಕ್ತಿ ಮುದ್ರೆ ಧರಿಸೀ ಹೆಮ್ಮಿಲಿ
ದುರಾಚರಣೆ ಮಾಡಿದ ಕ್ಷಮಿಸೀ ಸತ್ಸಂಗದಿ
ಅರಿವಿಗೆ ಮನನೀಲಿಸೀ ಹೊರೆವದು
ಗುರು ಮಹಿಪತಿಸ್ವಾಮಿ ಕರುಣಿಸಿ ಎನ್ನಾ ೩

## ೫೩೦

ಏನು ನಿನ್ನ ಹಿತವಾ ಪಡೆದ್ಯೋ ಯಲೆ ಜೀವವೇ ।
ಶ್ರೀನಾಥನಂಘ್ರಿ ನಂಬಿ ಸುಖಿಸಲಾರೆಯಾ ಪ

ಶ್ವಾನ ಸೂಕರಾದಾ ನಾನಾ ಯೋನಿಯಲ್ಲಿ ತೊಳಲಿ ಬಂದು ।
ಮಾನವ ಜನ್ಮ ಪುಣ್ಯದಿಂದ ಬಂದುದಾ ।
ಸಾನುರಾಗದಿಂದ ಸಂತರಾನುಗ್ರಹ ಪಡೆದು ಭವ ।
ಕಾನನದ ಮಾರ್ಗವನು ಜರೆಯಲಾಪೆಯಾ ೧

ಕಾಮ ಕ್ರೋಧ ಲೋಭವೆಂಬಾ ತಾಮಸದ ಬಲಿಗೆ ಸಿಲುಕಿ ।
ನೇಮಗೆಟ್ಟಾ ವ್ಯರ್ಥನಾದೆ ಹರಿಯ ನಾಮವಾ ।
ಪ್ರೇಮದಿಂದ ಸ್ಮರಿಸಿ ಭಕ್ತಿ ಸೀಮೆಯೊಳು ಪಡೆದು ಮುಕ್ತಿ ।
ಸಾಮರಾಜ್ಯ ಪದವಿಯನು ಸಾರಲಾಪೆಯಾ ೨

ಮರದು ತನ್ನ ನಿದ್ರೆಯೊಳು ಅರಸು ರಂಕನಾಗಿವಂತೆ ।
ಶರೀರ ತಾನೆಂಬ ವಿದ್ಯಾವಳಿದು ಜಾಗಿಸೀ ।
ಗುರು ಮಹಿಪತಿಸ್ವಾಮಿ ಕಿರಣವೆಲ್ಲರೊಳು ಕಂಡು ।
ಶರಣರಾ ವೃತ್ತಿಯೊಳು ಬರಸಲಾಪೆಯಾ ೩

## ೫೩೧

ಏನು ಮಾಡಲಿಯನ್ನ ಮನಸಿನಟ್ಟುಳಿ ಘನ ।
ನೀನೆ ನಿಲಿಸೋ ಹರಿಯೇ ದೊರೆಯೆ ಪ

ಪರಮ ಪಾವನ ನಿನ್ನ ಚರಿತವ ಕೇಳದು ।
ಬರಡ ಮಾತಿಗೆ ಪ್ರೇಮಾ ನೇಮಾ ೧

ಸಿರಿವರ ಮೂರ್ತಿಯನು ನೋಡಲೊಲ್ಲದು ।
ಸತಿಯರ ರೂಪಕೆಳಸುವದು ಹರಿದು ೨

ಸಂತರ ಚರಣಕೆರಗಿ ಬಿಗಿದಪ್ಪದು ।
ಭ್ರಾಂತ ಜನರೊಳಗೆ ಸಂಗಾ ೩

ಹರಿಯಂದೊದರಲು ನಾಲಿಗೆ ಬಾರದು ।
ಪರನಿಂದೆ ಜಪಿಸುವದು ಸರಿದು ೪

ಸಿರಿ ಚರಣಾರ್ಪಿತ ತುಲಸಿಯ ಸೇರದು ।
ಪರಿಮಳದಲಿ ಬೋಗಿಲಿ ಸಾಗಿ ೫

ಗುರು ಮಹಿಪತಿ ಪ್ರಭು ನಿನ್ನೆಚ್ಚರಿದಿ ಮನ ।
ವಿರಿಸಿಯನ್ನನುಳಹೋ ಸಲಹೋ ೬

## ೫೩೨

ಏನು ಹೇಳಿದರೇನು ಪಾಮರ ಜ್ಞಾನಿಯಾಗಬಲ್ಲನೇ ।
ದಾನವಾರಿಯ ನಂಬಲರಿಯದೆ ಹೀನ ವೃತ್ತಿಲಿ
ನಡೆವ ಮನುಜಗೆ ಪ

ಎತ್ತಿಗುತ್ತಮ ಲಿಂಗ ಮುದ್ರೆಯನ್ನೊತ್ತಿದ್ದರೆ ಬಸವನೆಂಬರು ।
ಕತ್ತೆಯನು ಹಿಡಿ ತಂದು ವತ್ತಲು ಕತ್ತೆಯಲ್ಲದೆ ಬಸವನಪ್ಪುದೆ ೧

ಚಿನ್ನ ಬಿಳುಪಿರೆ ಪುಟವನಿಕ್ಕಲು ಬಣ್ಣ ಹೆಚ್ಚುತ ಬಾಹುದು ।
ಇನ್ನು ಕರಗಿ ಹಿತ್ತಾಳೆ ನೋಡಲು ತನ್ನ ನಿಜವನ್ನು
ಬಿಟ್ಟುದೋರುದೆ ೨

ಸ್ವಾತಿ ಜಲಬಿಂದುದುರೆ ಸಿಂಪಿನೊಳಿಂತು ಮೌಕ್ತಿಕವಾಹುದು ।
ಅಂತ ಘಲ್ಲಿಯೊಳಹದೆ ಜಗದೋಳು ತಾತ ಮಹಿಪತಿ
ಕಂದ ಸಾರಿದ ೩

## ೫೩೩

ಕೇಳೆಲೋ ಪ್ರಾಣಿ ನಂಬಿ ಪೂಜಿಸು ಹರಿಯ ಪಾದಾ ।
ಪಾಲಿಸುವಾ ಗರದು ಅನುಭವ ಬೋಧಾ ಪ

ಗುರುವಿನಾ ಬಲಗೊಂಡು ಬಲಿಯೋ ಸ್ವಸುಖ ಪಡಕೋ ।
ಹರಿಯದೇ ನಾನಾ ಮಾರ್ಗವ ಕಂಡು ೧

ಕಂಡ ದೈವಕ ಹಲ್ಲಾ ದೆರೆದು ಬಾಗುವದಲ್ಲಾ ।
ಮಂಡೆ ದಡವಲ್ಲದೇ ಮತ್ತೇನಿಲ್ಲಾ ೨

ಇರಲು ಮನಿಲಿ ಧರಿಲುಳ್ಳಾ ಬಯಸಿದವಟಗಳೆಲ್ಲಾ ।
ತಿರುಕವ ಬೇಡಿ ಉಂಬುದು ಸಲ್ಲಾ ೩

ನೀರಡಿಸಿ ಬರಿಗೈಯ್ಯಾ ನೆಕ್ಕಿದರೇನು ಶ್ರಯಾ ।
ಗುರುವಿನ ಕೇಳು ಸ್ವಹಿತೋಪಾಯ ೪

ಹತ್ತು ಕಟ್ಟುವಕಿಂತ ಮುತ್ತು ಕಟ್ಟಬೇಕೆಂದೇ ।
ಅರ್ತರೊಲುವನು ಮಹಿಪತಿಸುತಂದೇ ೫

## ೫೩೪

ಗುರುಪರಂದೈವವೆಂದು ಗುರುಮನೆಯ ಹೊಕ್ಕು ಪಡಿ ।
ಪರಗತಿಯನ್ನ ಮನವೇ ಪ

ಹರಿವ ನದಿಯೊಳಗ ಕುಳಿತಿರುವ ಜ ।
ನರನು ಧಡಿಯ ಪೊರೆಗೊಯ್ದು ತೆರದಂತೆ ।

ಶರಣ ಬಂದವರ ದುರ್ಧರ ಭವ ಸಮುದ್ರದಿಂ ।
ತ್ವರಿತದಿಂ ದಾಟಿಸುವ ತಾನು ೧

ಕಟ್ಟಿ ಮನಿಯ ಪುಳವ ತಂದಿಟ್ಟು ತನ್ನಂದದಿ ।
ಘಟ್ಯಾಗಿ ಮಾಡುತಿಹಾ ।
ಸ್ಪಷ್ಟ ಭೃಂಗಿಯ ವೊಲು ಮುಟ್ಟಿ ಬಂದರೆ ತನ್ನ ।
ಮಟ್ಟ ತನ್ನಂತ ಮಾಳ್ಪಾ ಭೂಪಾ ೨

ಈ ಪರಿಯಲಾಗಿಹ ಮಹಿಪತಿ ಗುರು ಮಹಿಮೆಯ ।
ನಾ ಪೊಗಳಲೆನ್ನ ಅಳವೇ ।
ತಾ । ಪಸುಳೆ । ಕೃಷ್ಣನಾ ಟೋಪಮಂ ।
ಗೆಲಿಪನಾ । ಶ್ರೀ ಪದವ ಹೊಂದಿ ಸುಖಿಸೋ ತರಿಸೋ ೩

## ೫೩೫

ಗುರು ಗುರು ಎಂದು ಗುರುವಿನ ಬಾಗಿಲಲ್ಲಿ ।
ಇರುತಿಹೆ ನಿಜಶ್ವಾನನಾಗಿ ಸದ್ಭಾವದಲ್ಲಿ ।
ಗುರುವಿನೆಂಜಲನುಂಡು ಚಿತ್ಸುಖಾ ನೋಡ ಹೋದ ।
ಗುರುಪದ ಘನಧೂಳಿ ಸೋಕಲು ಧನ್ಯನಾದ ೧

## ೫೩೬

ಗುರುಭಕ್ತನೆವೆ ಧನ್ಯನು ಬಲು ಮಾನ್ಯನು ಪ

ಗುರುದಯ ಸಂಗಡಿಯನು ಹಿಡಿದಿಹನು ।
ತರಣೋಪಾಯವ ಕೂಡಿದಾ ನಲಿದಾಡಿದಾ ೧

ಅನ್ಯ ಮಾರ್ಗವ ನೋಡನು ತಾ ಕೂಡನು ।
ತನ್ನ ನಿಷ್ಠೆಯೊಳಾಡುವಾ ಗತಿ ಬೇಡುವಾ ೨

ಗುರು ಮಾತೇ ಮಂತ್ರ ವೆಂಬನು । ಸವಿ ದುಂಬನು ।
ಗುರು ಸೇವೆಯಲಿ ಬಾಳುವಾ ಅದೇ ಕೇಳುವಾ ೩

ಪುಂಡಲೀಕನ ಭಕ್ತಿಯಾ । ಆಸಕ್ತಿಯಾ ।
ಕಂಡು ತಾನೆವೆ ಬಂದನು ಮುಕುಂದನು ೪

ಕರುಣದಿ ತಂದೆ ಮಹಿಪತಿ । ಸುತ ಸಾರಥಿ ।
ನೆರೆ ಭಕ್ತಿ ಕೀಲ ಬೋಧನಾ ಹೇಳಿದನು ೫

## ೫೩೭

ಗುರುವಿನ ಕಾಣದೆ ಪರಗತಿ ದೊರೆಯದು ಪ

ವೇದ ಶಾಸ್ತ್ರಗಳ ನೋದಿ ಭೇದಿಸದೆ ।
ವಾದದಿಂದ ಜನಗೆದ್ದನು ।
ಕಾದಿ ಬೂದಿ ಕೊಂಡ ಗಾದಿಯಂತೆ ನಿಜ ।
ಸಾಧುರ್ಹಾದಿಯನೆ ಮರೆತನು ೧

ಚಾರು ಕರ್ಮ ಧರ್ಮ ಸಾರಯಜ್ಞದಿ ।
ಭೂರಿಯಶವನೆ ಪಡೆದನು ।
ಏರಿ ಸ್ವರ್ಗದಿ ಜಾರಿ ಬಿದ್ದ ಸಂ ।
ಸಾರ ವಾರಿಧಿಯ ಸೇರಿದನು ೨

ರಂಜನಿಂದ ವಣಭಂಜನ್ಯಾತರೆದು ।
ಕಂಜನಾಭನ ನೆರೆ ನಿಲುಕನು ।
ಅಂಜಲೆತ್ತಿದರ ಗುರು ಮಹಿಪತಿ ।
ಪ್ರಾಂಜಳಾಗಿ ಘನದೋರುವನು ೩

## ೫೩೮

ಗುರುವಿನಾ ಯಾಕೆ ಮರೆಯುವಿರಣ್ಣಾ । ಈ ಲೋಕದೊಳಗ ।
ಸಿರಿಯರಸನ ಶುಭ ಚರಣದರಹು ನೀಡಿ ।
ಧರೆಯೊಳು ದೀನರುದ್ಧರಿಸುತ ಮೆರೆವಾ ಪ

ಮನಸಿನ ಜಾಡ್ಯ ತನವನು ಬಿಡಿಸಿ । ಶ್ರವಣಾದಿಗಳಿಂದ ।
ಅನುವಾಗಿ ಬೋಧಾಮೃತವನೆ ಕುಡಿಸಿ । ಭಕ್ತಿಯ ಕಳೆಯಂಬಾ ।
ಘನವಾದಲಂಕಾರವನೆ ತೊಡಿಸೀ । ಯೋಗದ ಸಿರಿಯಿಂದಾ ।
ಅನುದಿನ ಜ್ಞಾನಾಂಗನೆಯೊಡನಾಡುವ
ಚಿನುಮಯ ಮಂದಿರವನು ತೋರಿಸುವಾ ೧

ನೀರಿನಾ ಬೊಬ್ಬುಳಿಯಂತೀ ತನುವು । ಮಿಂಚಿನಾ ತೆರನಂತೆ ।
ತೋರಿಯಡಗುವದು ಸಂಪದ ಧನವು ।
ವಿಷಯಂಗಳ ತಾ ಮೃಗ ।
ನೀರಂತೆ ಕಾಣದೆ ಮೋಹಿಪ ಮನವು । ಇದನೆಚ್ಚದೆ ಬ್ಯಾಗ ।
ಘೋರವೆನಿಪ ಸಂಸಾರದ ಬಲಿಯನು ।
ಜಾರಿ ಶುಭೇಚ್ಛೆ ವಿಚಾರಕ ತಂದು ೨

ಅತಿ ಸ್ನೇಹದಿಂದಲಿ ಅಭಯವ ನೀಡಿ ।
ವೇದಾಂತದ ನುಡಿಯಾ ।
ನತರಿಂಗೆ ವಿಚಾರಿಸಿ ತಾ ದಯಮಾಡಿ ।
ಲೋಹ ಪರಸವ ನೆಶಿದಾ ।
ಗತಿಯಂತೆ ಮುಕ್ತನ ಮಾಡುವ ನೋಡಿ ।
ಸ್ವಾನುಭವ ಸುಖದಾ ।
ಕ್ಷಿತಿಯೊಳು ಗುರುಮಹಿಪತಿ ಸುತ ಪ್ರಭುವಿನಾ ।
ಗತಿ ಮತಿ ಕೂಡಿಸಿ ಗತಿಯನೆ ಕೊಡುವಾ ೩

## ೫೩೯

ಗುರುವಿಗೆ ನಮಿಸುವೆನು । ಸಲಹುವ ಪ

ಭಕ್ತಿಯ ಒಲಿಸೀ । ವಿರಕ್ತಿಯ ಬೆಳೆಸೀ ।
ಮುಕ್ತಿಗೆ ನಲಿಸೀ । ಯುಕಿಗಳನೇ ಕಳಿಸಿ ೧

ಅವಿದ್ಯ ಬಿಡಿಸಿ । ಸುವಿದ್ಯೆವಿಡಿಸಿ ।
ಭವ ಭಯಗಡಿಸಿ । ವಿವೇಕ ವಡಗೂಡಿಸೀ ೨

ಗುರು ಮಹಿಪತಿ । ಶರಣರ ಸಾರ್ಥಿ ।
ತರಳಗ ಸ್ಫೂರ್ತಿ । ಕರುಣಿಸಿ ಘನಮತಿ ೩

## ೫೪೦

ಗುರುವಿನ ನೋಡಿರೋ ಕರುಣವ ಪಾಡಿರೋ ಪ

ದೀನ ಜನರ ಅಭಿಮಾನಿ ನಿಜ ಸುಖದಾನಿ ಮಹಾಸುಜ್ಞಾನಿ ।
ಸ್ವಾನುಭವ ದಾಗರ ಗುಣಗಂಭೀರ ಪರಮ ಉದಾರ ।
ಮಾನಸದ ನಿಜಸ್ಫೂರ್ತಿಯಾಗಿಹ
ಮೂರ್ತಿ ವಿಮಲ ಸುಕೀರ್ತಿ ।
ತಾನೇ ತಾನಾಗಿರುತ ಜಗದೊಳು
ಭರಿತನಾದಸುರ ಚರಿತನು ೧

ಪರಕ ಪರತರದರಹು ಚಿನುಮಯದಿರಹು
ವಿಡಿಯುತ ಕುರುಹು ।
ನಿರುತ ತತ್ವದ ಬೊಂಬೆಯೆನೆ ಸುಖದಿಂಬೆ ಅದು ಏನೆಂಬೆ ।
ನರ ಶರೀರದೆ ಬಂದ ಪರಗೃಹಲಿಂದಲ್ಯಾಡೊದ ಛಂದ ।

ಹೊರಗ ದಿವ್ಯದ ಭೋಗ ಒಳಗ
ವಿರಾಗದೋರಿದ ಯೋಗನು ೨

ಕರೆದು ಬೋಧದ ಮಳೆಯ ಜ್ಞಾನವ
ಬೆಳೆಯದೋರಿದ ಕಳೆಯ ।
ಮರೆದ ಮುನ್ನಿನ ಠಾವ ದೋರಿಸಿ ಜೀವನ್ಮುಕ್ತಿಯ ನೀವ ।
ಗುರು ಮಹಿಪತಿ ತಂದೆ ಶರಣವ ಬಂದೆ
ನಮೋ ನಮೋ ಎಂದೆ ।
ತರಳ ಕಂದನ ನೋಡಿ ಅಭಯವ ನೀಡಿ
ಕರುಣವ ಮಾಡಿದ ೩

## ೫೪೧

ದಾಸ ನಾನೆಂಬೇ ಗುರು ಭಕುತರಾ ಪ

ಗುರುವೇ ಜನಕ ಘನ ಗುರುವೇ ಜನನಿಯ ।
ಗುರುವೇ ಗೆಳೆಯ ನಿಜ ಗುರುವೇ ಆತ್ಮನು ।
ಗುರುವೇ ಬಂಧುವು ಗುರುವೇ ಇಷ್ಟನು ।
ಗುರುವೇ ಗತಿಮತಿ ಗುರುವೆಂದವರಾ ೧

ಗುರುವೇ ಚತುರ್ಮುಖ ಗುರು ಕಮಲಾಂಬಕ ।
ಗುರುವೇ ಸದಾಶಿವ ಗುರುವೇ ಸಂತರು ।
ಗುರುವೇ ಸುರಭಿಯ ಗುರು ಚಿಂತಾಮಣಿ ।
ಗುರು ಧನದ್ರವ್ಯನು ಗುರುವೆಂದವರಾ ೨

ಗುರು ವಚನವೇ ಶೃತಿ ಗುರುದಯ ಮುಕ್ತಿಯು ।
ಗುರು ಗೃಹ ಕ್ಷೇತ್ರವು ಗುರು ನೋಟ ಪರಸವು ।
ಗುರು ಸ್ಮರಣೆಯೇ ಜಪ ಗುರು ಮಹಿಪತಿ ಪ್ರಭು ।
ಗುರು ಭಕ್ತಿಯೇ ತಪ ಗುರುವೆಂದವರಾ ೩

## ೫೪೨

ದಾಸಿಯಾಗುವೆನೇ ಗುರುವಿನ ಮನೆಯಾ । ನಿ ।
ರ್ದೋಷ ಪದವಿ ಈವ ನಿಜ ದೊರೆಯಾ ಪ

ಮನೋಮಂಟಪದೊಳಗೆ ಅನುಮಾನ ಕಸನೀಗಿ ।
ಅನುದಿನ ನಿಶ್ಚಲದ ತಳಿಯಾ ಬಿಂಬಿಸಿ ।
ಮುನಿಯ ಸೇವೆ ಹಾರೈಸುವೆ ಬಿನಗು ಶಬ್ದಜ್ಞಾನಿಗಳ ।
ಮನಿಲಿ ನಿಂತು ಹೊತ್ತಂಗಳಿಯೆ ನೆನವಿಲಿರುತಾ ೧

ವಿವೇಕದ ಕೊಡದೊಳು ಭಾವವೆಂಬ ಜಲವ ತುಂಬಿ ।
ಸಾವಧಾನ ಸಿಂಬಿಲಿರಿಸಿಕೊಂಡು ಬರುತಾ ।
ದೇವ ಗುರುರಾಯ ನಡಿದಾವರೆಯ ಊಳಿಗಕ ।
ಆವಾಗ ತಂದೆರೆವೆನು ಹರುಷದಲಿ ೨

ಅರಹು ಎಂಬ ಸೀರೆಯುಟ್ಟು ಕುರುಹುವೆಂಬ ಕುಪ್ಪಸದಲಿ ।
ಗುರುಕೊಟ್ಟ ಬೋಧ ಪಡಿಯದನ್ನ ಉಣುತಾ ।
ವರದ ತಂದೆ ಮಹಿಪತಿ ಚರಣವ ನೋಲೈಸಿ ಇಹಪರ ।
ವೆರಡು ಗೆಲಿದು ನಿಜಗತಿ ಪಡೆವೆನೋ ೩

## ೫೪೩

ಮೋಕ್ಷವಿಲ್ಲಾ । ಗುರು ಕೃಪೆ ವಿನಾ ಪ

ಮಾನ್ಯ ಸ್ವದೇಶದಿ ಧನ್ಯ ವಿದೇಶದ ।
ಉನ್ನತ ಕುಲದುತ್ಪನ್ನ ನೋಡಲು ।
ಸನ್ನುತ ಕರ್ಮಗಳನ್ನುಸುವ ಸಂ ।
ಪನ್ನನು ಗುಣದಲಿ ಮುನ್ನಾಗೇನು ೧

ಪುಸ್ತಕ ಹಿಡಿಯಲು ವಸ್ತು ಬೃಹಸ್ಪತಿ ।
ವಿಸ್ತರಿಸ್ಹೇಳುವ ಶಾಸ್ತ್ರದರ್ಥವ ।
ದುಸ್ತರ ಯೋಗದ ನಿಸ್ತರಿಸುವ ಘನ ।
ಪ್ರಸ್ತುತ ತಪಸಭ್ಯಸ್ತ್ರಾಗೇನು ೨

ಸುಂದರಿ ಮಾನಿನಿಗೊಂದೇ ಮಂಗಳ ।
ಹೊಂದದೇ ಆಭರಣೆಂದೇನು ಫಲ ।
ಇಂದಿರೆ ಪತಿ–ವಲುವಂದದಿ ಭಾವದಿ ।
ತಂದೆ ಮಹಿಪತಿಗೊಂದಿಸದನಕಾ ೩

## ೫೪೪

ಶ್ರೀ ಗುರು ಮೂರ್ತಿಯನು ನಂಬಿ ಧ್ಯಾನಿಸಿ ಜನರು ।
ನೀಗಿ ಚಂಚಲ ಚಿತ್ತದಾ
ಭಾಗವತ ಧರ್ಮದಿಂದರ್ಚಿಸಲು ಕರುಣ ಮಳೆ ।
ತಾಗದು ಸಲಹುವನು ಭವ ಪಾಶದೆಶೆಯಿಂದ ಪ

ಎಳೆಯ ಮಾದಳಿರ ಸೋಲಿಸುವ ಮೃದುತರ ಬೆರಳ
ಹೊಳೆವ ನಖ ಚಲುವ ಪಾದಾ ।
ನಳ ನಳಿಪ ಪವಳ ಮಣಿಯಂತೆ ಹರಡಿನ ಸೊ....
ವಿಲಸಿತದ ಜಂಘೆದ್ವಯದಾ ।
ಬೆಳೆದ ಬಂಗಾರ ಕದಳಿಯ ಸ್ತಂಭ ಪೊಳವ
ನಿಚ್ಚಳದ ಜಾನೂರದ ಸ್ಫುರದಾ ।
ವಲುಮೆಮಿಗೆ ತನು ಮಧ್ಯ ಸಂಪಿಗೆಯ ಗಂಭೀರನಾಭಿ ಕಿರು
ಡೊಳ್ಳು ತ್ರಿವಳಿ ವಾಸನೆಯ ಛಂದಾ ೧

ಪುತ್ಥಳಿಯ ಹಲಗಿ ಕಾಂತಿಯ ಲೊಪ್ಪುತಿಹ ಉರದ ।
ವತ್ತಿಡದ ಕೊರಳ ಮಾಟಾ।

ದ್ವಿತ್ತಕರ ಕೆಂದಾರವರೆಯ ಸೊಂಪು ಮಣಿ ಬಂಧ ।
ಮತ್ತ ಊರ್ಪರಿಯಕಟಾ ।
ಮೊತ್ತದೋರ್ವಂಡ ಭುಜ ಶ್ರವಣ ನುಣ್ಗದಮುಗಳು ।
ಹೆತ್ತ ಪಲ್ವಧರ ನೀಟಾ ।
ಉತ್ತಮದ ನಾಶಿಕವು ಶಶಿ ಸೂರ್ಯ ಪರಿನಯನ ।
ವೆತ್ತ ಭ್ರೂಲತೆ ಪೆರ್ನೊಸಲ ಸುಕೇಶಿಯ ಜೂಟಾ ೨

ನವ ಸುವರ್ಣದ ಮುಕುಟ ಮಣಿ ತೇಜದೊಳೆ
ಸೆವ ಯುಗ್ಮ ಕುಂಡಲಗಳು ।
ನವರತ್ನ ಹಾರ ಮಂಡಿತ ಪದಕ ವಡ್ಯಾಣ ।
ಠವ ಠವಿಸುತಿಹ ಸರಳು ।
ಬವರದೊಳು ಚಿತ್ತ ತೆತ್ತೀಸ ತಾಯಿತ ಕಡ
ಗವೆ ವಜ್ರ ದುಂಗುರಗಳು ।
ತವಕದೊಳ್ ನಿರೆ ಹಾಕಿ ದಂಬರವ ಮೌಲಿಕದ ।
ರವದ ಸಾಲಗೆಜ್ಜೆ ಕಾಲ ಕಡಗ ಅಂದುಗೆಗಳು ೩

ದ್ವಿನಯನ ಮಧ್ಯ ರಾಜಿಸುವ ಮಂಟಪದೊಳಗ
ಧ್ಯಾನ ಸಿಂಹಾಸನದಲಿ ।
ಸಾನು ರಾಗದಲಿ ಕುಳ್ಳಿರಿಸಿ ಚರಣ ದ್ವಯವ
ಜ್ಞಾನ ಗಂಗೋದಕದಲಿ ।
ಮಾನಸದಿ ಅಭಿಷೇಕವನೆ ಮಾಡಿ ಸಲೆ ಪೂಸಿ
ಆನಂದ ವಸ್ತ್ರ ಗುಣಲಿ ।
ಮೌನದಲಿ ಲಯಲಕ್ಷಿ ಗಂಧಾಕ್ಷತೆಯ ಸುಮನ
ತಾನಿಟ್ಟು ಬೆಳಗಿ ಧೂಪದಿ ಏಕಾರತಿಗಳಲಿ ೪

ಬಳಿಕ ಕಸ್ತೂರಿಯ ಕೇಶರದ ಚಂದನ ಪೂಸಿ ।
ಕಳೇವರಕ ವಪ್ಪಿಲಿಂದಾ ।
ಥಳ ಥಳನೆ ರಂಜಿಸುವ ಬಟ್ಟ ಮುತ್ತಿಶಾಶೆ
ಗಳನಿಟ್ಟು ಬೇಗ ಛಂದಾ ।
ಚಲುವ ಮಲ್ಲಿಗೆ ಕುಂದರ್ಕೆ ಜಾಜಿ ಕೇತಕಿಯು

ನಳಿನ ಮೊದಲಾದರಿಂದಾ ।
.....ರ ಮಾಲೆಯಾ ಹಾಕಿ ಪರಿಮಳದಿ ಧೂಪವನು ।
.....ಸಂಚಿತ ದಶಾಂಗದಿ ಚಕ್ಷು ಜ್ಯೋತಿಯಿಂದಾ ೫

ವರಶಾಂತಿ ಶಕ್ತಿ ಯರ್ಚಿಸಿ ಕುಳ್ಳಿರಿಸಿ
ಪುರುಷಾರ್ಥ ದೀಪಂಗಳು ।
ಮೆರೆಯುತ ಪ್ರಜ್ವಲಿಸಿ ತರುವಾಯ ಕನಕಮಯ ।
ಹರಿವಾಣ ಬಟ್ಟಲುಗಳು ।
ಪರಮಾನ್ನ ಪಂಚಭಕ್ಷಗಳನ್ನ ಸೂಪಘೃತ
ಪರಿ ಪರಿಯ ಶಾಖಂಗಳು ।
ಸುರಸ ಪಾಲು ಮೊಸರು ತನಿವಣ್ಣಲುವಗಾಯಿಕೇಸರ ।
ಧರಿಯೊಳಗ ಲೇಹ ಪೇಹ ಮೊದಲಾದ ಭೋಜ್ಯಂಗಳು ೬

ಇನಿತು ಅರ್ಪಿಸಿ ಸ್ವಾದುದಕ ಕೈದೊಳೆದು ।
ಗುಣದಿತ್ತು ತಾಂಬೂಲವಾ ।
ಅನುಭವದಾರತಿಯು ಪುಷ್ಪಾಂಜುಳಿ ನಮನ ಪ್ರದ
ಕ್ಷಿಣ ಗೀತ ನೃತ್ಯ ಮುದವಾ ।
ಘನ ತೀರ್ಥಸು ಪ್ರಸಾದವ ಕೊಂಡು ಸೂರ‍್ಯಾಡಿ
ಅನುವಾಗಿ ಸಖ್ಯದನುವಾ ।
ಮನುಜ ಜನ್ಮಕ ಬಂದು ಗುರು ಮಹಿಪತಿ ಸ್ವಾಮಿ ।
ಘನದಯವ ಪಡಕೊಂಡು ಪಡೆಯೋ ಮುಕ್ತಿಯ ಸ್ಥಳವಾ ೭

## ೫೪೫

ಸದ್ಗುರುವಿನ ದಯವಾಗಬೇಕು । ತನ್ನ ।
ಸದ್ಗತಿಗೆ ಅನ್ಯ ಸಾಧನ ಹೋಕು ಪ

ಕನ್ನಡಿಯ ಕಿಲುಬು ಹತ್ತಿ ಮುನ್ನ । ಮಾಸಿರಲು । ಮತ್ತ
ದನ್ನೇ ಜಾಣ ಬಂದು ಬೆಳಗಲಾಗಿರುಹು ।
ತನ್ನ ತೋರುವಂತೆ ನಿಜವಾಗೀ ।
ಮನಸಿನ್ನ ಕದಡು ಗಳಸುವನು ಯೋಗೀ ೧

ಓದಿ ಕೇಳಿ ತಿಳಿದರೇನು ಭೇದಿಸದು ನಿಜ ಸುಖ ।
ಸಾಧಿಸಿ ಬಯಲ ಗಂಬಾರನಲ್ಲಿ ।
ಮುತ್ತು ಇದ್ದರೇನು ಯಜ್ಞವಾಗದಲ್ಲಿ । ಅದಕ ಸಾಧು ।
ಜೋಹರೆನೆವೆ ಬುದ್ಧಿಯಲ್ಲಿ ೨

ಗರಡಿಲಿಟ್ಟು ಹುಳುವ ತನ್ನ ಗುರುತ ತೋರುವದು ಭ್ರಂಗೀ ।
ಅರಿಯದೇನು ಜನಾ ಗಾದಿಯಲ್ಲಾ ।
ಗುರು ಚರಣ ನಂಬದೆವೆ ಮುಕ್ತಿಯಿಲ್ಲಾ ।
ಇದು ಸಾರಿದನು ಮಹಿಪತಿ ಸೊಲ್ಲಾ ೩

## ೫೪೬

ಸದ್ಗುರು ದಯಾ ಸಾಧ್ಯವಾಗದೇ ಜ್ಞಾನವಿಲ್ಲಾ ।
ಸದ್ಗತಿ ಕೀಲರಿತವನೇ ಬಲ್ಲಾ ಪ

ಖಟಪಟ ವೃತದೊಳಿಲ್ಲಾ ।
ಘಟಮಟ ಶಬ್ದದೊಳಿಲ್ಲಾ ।
ಥಟ್ಟನೆ ಸಂಸಾರ ತೊರೆದರಿಲ್ಲಾ ೧

ಬಹೂನಾಂ ಜನ್ಮನಾ ಜಾಯಂತೆ ।
ಜ್ಞಾನವಾನ್ ಮಾಂ ಪ್ರಪದ್ಯತೆ ।
ಶ್ರೀ ಹರಿ ಹೇಳಿದ ಗಾದಿಮಾತೆ ೨

ವಸುಧಿಯೊಳೆಲ್ಲಾ ಜನಕೆ ।
ಹಿಂಗಾದರ ಸಾಧನ ಬೇಕು ।
ಋಷಿಮುನಿಗಳು ಸಾಹಸಬಡುವರ್‍ಯಾಕ ೩

ಮನುಷ್ಯಣಾಂ ಸಹಸ್ರೇಷು ।
ವೆಂಬಾ ಗೀತೆಯ ನುಡಿಲೇಸು ।
ಜನದಲಿ ಗರ್ವಾಭಿಮಾನಿಗೆ ಬಿರುಸು ೪




ಗುರಿಯಿಲ್ಲದ ಅಂಬು ತಾನು ।
ಎರಗುದೇ ಗುರಿಯಾ ಸ್ಥಳವನು ।
ಗುರುಮಹಿಪತಿ ನಂದನು ಸಾರಿದ ನಿಜನು ೫

## ೫೪೭

ಸಾವಧಾನಾಗಿ ಮಾಡೆಲೋ ಗುರುಭಕ್ತಿ ।
ಕಾವಕರುಣಾಳುದೋರಿ ನಿಜ ಮುಕ್ತಿ ಪ

ಗುರುನಾಮ ಸ್ಮರಣೆ ಅನುದಿನಾ ।
ಗುರುಮೂರ್ತಿಯ ಮಾಡಿ ನಿಜಧ್ಯಾನಾ ।
ಗುರುಚರಣವ ಪೂಜಿಸು ನಿಧಾನಾ ।
ಗುರು ನಮನದಿ ಹಾಕಿ ಲೋಟಾಂಗಣಾ ೧

ಗುರುಭಕ್ತರ ಸಂಗವನು ಮಾಡಿ ।
ಗುರು ಕರುಣದ ಮಹಿಮೆಯ ಪಾಡಿ ।
ಗುರುವಾಕ್ಯ ಪ್ರಸಾದವನು ಬೇಡಿ ।
ಗುರು ಅಭಯವ ಕೊಂಡು ನಲಿದಾಡಿ ೨

ಗುರುವಿನಲ್ಲಿ ಹಿಡಿಯದೆ ನರಭಾವಾ ।
ಗುರುವಿಗರ್ಪಿಸಿ ತನುಧನ ಮನ ಜೀವಾ ।
ಗುರುದಯದಿಗೆಲಿದು ಭವ ಬಂಧನವಾ ।
ಗುರುಮಹಿಪತಿ ಬಾಲನಾಗಿರುವಾ ೩

## ೫೪೮

ಸುಖದಕ್ಕಿತೇ । ಸುಖದಕ್ಕಿತು ಗುರುದಯ ಲೆಕ್ಕಾ ಪ

ಕಂಡವರ ಮಾತಿಗೆ ಮನವಿಟ್ಟು ಜಗದೊಳು ।
ಹಿಂಡದೈವಕ ಬಾಯಿದೆರುತ್ತಿದ್ದೆನೆ ।
ಮಂಡಿಯ ಮ್ಯಾಲೆನ್ನಾ ಕರವಿಟ್ಟು ಹೊಳೆವಾ
ಪಿಂಡಾಂಡದಿ ಗಂಡನ ತೋರಿದನಕ್ಕ ೧

ಇಲ್ಲೆಂಬ ಸಂಶಯ ಹೋಯಿತು ಒಳಹೊರ ।
ಗೆಲ್ಲೆಲ್ಲಿ ನೋಡಲು ತಾನಾದನೇ ।
ಫುಲ್ಲನಾಭನ ಕೂಡಿ ತನುಭಾವ ಮರದು ।
ಕೈವಲ್ಯ ಮಂದಿರ ಸಾರಿದೆನಕ್ಕಾ ೨

ಏನ ಹೇಳಲಿ ಆಡು ತಾಡುತಾ ಯಡಹಿನಿ ।
ಧಾನವ ಕಂಡಂತಾಯಿತೇ ।
ಮಾನುಭಾವರಸಾದ ತಂದೆ ಮಹಿಪತಿ ।
ತಾನೊಲಿದೆನ್ನನುದ್ಧರಿಸಿದನಕ್ಕಾ ೩

## ೫೪೯

ಸುಮ್ಮನೆ ಗತಿಯ ಬಯಸಿದರಾಹುದೇ ।
ಹಮ್ಮ ನೀಗಿ ಕ್ಷಿತಿಯೊಳು ವಮ್ಮನವಾಗಿ ನಿಲ್ಲದೇ ಪ

ಭಕುತಿಯಂಕುರವಿಲ್ಲಾ ಯುಕುತಿ ಸಾಧನವಿಲ್ಲಾ ।
ಮುಖದಲಿ ಸ್ತುತಿ ಸ್ತವನಗಳಿಲ್ಲಾ ।
ಪ್ರಕಟದಿ ಶೋಡಷ । ಸುಕಲೆಯಾರ್ಚನೆಯಿಲ್ಲಾ ।
ಅಕಳಂಕ ದೇವ ನಂಬುಗೆ ದೃಢ ವಿಡಿಯಲಿಲ್ಲಾ ೧

ವೇದ ಪುರಾಣವನು ಓದಿ ಕೇಳಿದರೇನು ।
ವಾದಗುಣದಿ ಹಿಂಗಲಿಲ್ಲಾ ತಾನು ।
ಸಾಧಿಸಿಕೊಳ್ಳದೇ । ಸಾಧುರ ಬೋಧವನು ।
ಗಾರ್ದಭ ಚಂದನ ಹೊತ್ತಂತೆ ಏನಾದರೇನು ೨

ಗುರುಪಾದಕೆರಗದೆ । ಗುರುಮಾರ್ಗವರಿಯದೆ ।
ಮೊರೆವಾರು ಅರಿಮದವ ಮುರಿಯದೇ ।
ಪರವಸ್ತು ಇದೆಯೆಂದು । ನರಭಾವ ಮರೆಯದೆ ।
ಗುರುಮಹಿಪತಿ ಸುತ ಪ್ರಭು ಗುರುತ ದೋರದೇ ೩

## ೫೫೦

ಹೀಂಗಲ್ಲಾ ಮನುಜಾ । ಸುಮ್ಮನೆ ।
ದೊರಕುವುದೇ ಪರಮಾರ್ಥ ಪ

ಜರಿದು ಆಶ್ರಮ ಧರ್ಮಾ ವೇಷ ವಿರಕ್ತಿಯಿಂದಾ ।
ಚರಿಸುತ ಬಳಲುವರೇ ವ್ಯರ್ಥ ೧

ಕ್ರಮದ ಹಾದಿಯ ಬಿಟ್ಟು ಅಡವಿ ಬೀಳಲು ಎಲ್ಲ ।
ಕಮರಿಯಲ್ಲದೇ ಗ್ರಾಮವಾರ್ತಾ ೨

ಕಣ್ಣಿನೊಳಂಜನಿಲ್ಲದೇ ಹಲವು ಸಾಧನದಿಂದಾ ।
ದಣ್ಣನೇ ದಣಿವರೇ ದ್ರವ್ಯಕುರ್ತಾ ೩

ಕರಗದೆ ವಾಸನೆ ತಪಹೀನ ಅಂತರ್ಗತ ।
ಜ್ವರವಿರಲಾರೋಗ್ಯದ ಸ್ನಾನಾರ್ಥ ೪

ತಂದೆ ಮಹಿಪತಿ ಸುತ ಪ್ರಭು ಒಲುಮೆಯಾ ।
ಛಂದದಿ ಪದ ಕೊಂಡವನೇ ಧೂರ್ತಾ ೫

## ೫೫೧

ಅಲ್ಲೇ ನಿಲ್ಲೇನು । ಯೋಗಿಗೆ । ಅಲ್ಲೇ ನಿಲ್ಲೇನು ಪ

ಎಲ್ಲಿ ನೋಡಿದರಲ್ಲಿ ಫುಲ್ಲನಾಭನೇ ಇಹ । ಅಲ್ಲೇ ನೀಲ್ಲೇನು ।
ನಿಲ್ಲದ ಮನಸಿನ ಕಾಲಾಟ ಒದಗಿತು । ಅಲ್ಲೇ ನಿಲ್ಲೇನು ೧

ನೀರೊಳಗಾನಂದಲ್ಯಾಡುವ ಮೀನಕ । ಅಲ್ಲೇ ನಿಲ್ಲೇನು ।
ಹರುಷದಿ ಕಾನನ ತಿರುಗವ ಎರಳೆಗೆ । ಅಲ್ಲೇ ನಿಲ್ಲೇನು ೨

ತಳಿತಿಹ ಬನದೊಳು ತಿರುಗುವ ಪಕ್ಷಿಗೆ । ಅಲ್ಲೇ ನಿಲ್ಲೇನು ।
ನೆನೆನುಡಿ ಸಾರಿದ ಮಹಿಪತಿ ನಂದನ । ಅಲ್ಲೇ ನಿಲ್ಲೇನು ೩

## ೫೫೨

ಅವನೆವೆ ದಾನವನು ನೋಡಿರೋ ।
ಅವನವೇ ದಾನವನು ಪ

ದಾವನು ಸಾಕುವ ದೇವರ ಮರೆದು ।
ಅವಿವೇಕತನದಲಿ ಜೀವಿಸುತಿಹಾ ಅ.ಪ

ವಿಷಯದ ಸಂಭ್ರಮದಾ ಸ್ಥಿರಪಟ್ಟಾ ।
ವಸುಧಿಲಿ ಬಗದಾವಾ ।
ಆಶನ ವ್ಯಸನದೊಳು ಪಶುವಿನ ಪರಿಯಲಿ ।
ನಿಶಿದಿನ ಗಳೆವುತ ದೆಶೆಗೆಟ್ಟು ಹೋದಾ ೧

ಸಾಧು ಸಂಗಕ ದೂರಾ ಶ್ರವಣದ ।
ಹಾದಿಗೆಂದಿಗೆ ಬಾರಾ ।
ಸಾಧಿಸಿ ಕುವಿದ್ಯಾವಾದಾ ಆಟಗಳನು ।
ಸಾದರ ನೋಡುತಾ ತಾ ದಿನಗಳೆವಾ ೨

ಗುರು ಮಹಿಪತಿ ಬೋಧಾ ನಂದನು ।
ಸಾರಿದನಾ ಹಿತವಾದಾ ।
ಹರಿನಾಮಾವೆಂದಿಗೆ ಸ್ಮರಿಸು ಮುಖದೊಳು ।
ನರದೇಹವೆಂಬುದು ಬಾರದು ನೋಡಿ ೩

೫೫೩

ಅವನೆವೆ ಯೋಗ್ಯ ನೋಡಿರ್ಯೆ ಭಕುತಿಗೆ ।
ಸಾಯಾಸವಿಲ್ಲದ ಯ್ಯೆದನವನಿಯೊಳಗ ಮುಕುತಿಗೆ ಪ

ದಾವ ನಿತ್ಯ ಶ್ರವಣ ಮಾಡಲೆಂದು ಬ್ಯಾಸರಾ ।
ಹ್ಯಾವ ಹೆಮ್ಮೆಯಲ್ಲಿ ಕಳಿಯ ವ್ಯರ್ಥವಾಸರಾ ।
ನೋವ ಮಾಡುತಿರಲು ತಾಪತ್ರಯದ ತೂರಾ । ಬಳಲ
ಆವಗಿರುವ ಕೂಡಿಕೊಂಡು ಹರಿಯ ದಾಸರಾ ೧

ನ್ಯೂನ ನೋಡದೆ ಪರರ ಸದ್ಗುಣವನೆ ಕೊಂಬನು । ದಂಭ ।
ಮಾನ ತೊರೆದು ಸ್ತುತಿಯ ನಿಂದ್ಯ ಸರಿಯ ಕಾಂಬನು ।
ಜ್ಞಾನದಿಂದ ಪಡೆದು ಗುರುಹಿರಿಯರಿಂಬನು । ತ್ವರಿತ ।
ಸ್ವಾನುಭವದ ಸೌಖ್ಯಸಾರ ಸವಿಯನುಂಬನು ೨

ಬಲಿದು ಭಾವನಿಂದ ತಿಳಿದು ಸ್ವಹಿತುಪಾಯನು ದೃಢದಿ ।
ಹಲು ಮನಿಜರಿದಿರ ಹೋಗಿ ದೆರಿಯ ಬಾಯನು ।
ತಳೆದು ವೇಷದಿಂದ ದಣಿಸವಾವ ಕಾಯನು । ಹೃದಯ ।
ದೊಳನವನ ನಲುವ ಗುರುಮಹಿಪತಿ ಪ್ರೀಯನು ೩

೫೫೪

ಅವ ಸಂತನಲ್ಲಾ ಸಂತರ ವೇಷದಿ ತಿರುಗಲೇನು ಪ

ಸಂತರಲ್ಲಿ ಹೋಗು । ಅಂತರ ಸುಖವರಿಲಿಲ್ಲಾ ।
ತಂತುವಿಡಿಯದೇ ಸ್ಥಿತಿ । ಭ್ರಾಂತತನಲ್ಯಾಡುವವ ೧

ಮಂಜುಜ್ಞಾನದಿಂದ ಬಹು । ರಂಜನೆಯಾ ಮಾಡಿ ।
ಬಂಜೆ ಹೂವಿನಂತೆ ಒಣ । ಭಂಜನೆಯಾ ದೋರುವವ ೨

ನಿಷ್ಠೆಯಿಂದ ಪರವಸ್ತು । ಮುಟ್ಟಿಗಾಣಲಿಲ್ಲಾ ।
ಭ್ರಷ್ಟ ಬೂಟಿಕೆಯ ಮಾಡಿ । ಹೊಟ್ಟೆಯನೇ ಹೊರೆವನವ ೩

ಮ್ಯಾಲ ಸಾಧುವೇಷ । ಒಳಗೆ ಖಳದೋಷ ।
ತಾಳಿ ಗರ್ವದಿಂದ ಸಾಧು । ಶೀಲ ಕುಂದ ನೀಡುವವ ೪

ಗುರು ಮಹಿಪತಿಸುತ । ಸಾರಿದ ನೋಡಾ ।
ಶರಣರಿಗೇ ಬಾಗಿ ಅವರ ಚರಿತೆಯ ಕೊಂಡಾಡದವ ೫

೫೫೫

ಆರಾದರಾಗಲಿ ಮೂರ್ಖರ ಮನಸಿನ
ಮೋಡಿಯ ಅಸಗೊಳದೈ ಪ

ಆರಾದರಾಗಲಿ ಮೂರ್ಖರ ಮನಸಿನ
ಮೋಡಿಯ ಅಸಗೊಳದೈ ।
ಧೀರರು ಪಾಯವ ಗಾಣದೆ ಸುಮ್ಮನೆ
ಕುಳಿತರು ಕೈದೆಗೆದೈ ೧

ಕುಡತಿಯ ಹಾಲದಿ ಕ್ಷಾರ ಸಮುದ್ರವ
ಸಿಹಿಮಾಡಲು ಬಹುದೈ ।
ಬಡಿದೆಬ್ಬಿಸಿ ಸಿಂಹನ ಮರಿಯೊಡನೆ
ಸೆಣಸುತ ಗೆಲಬಹುದೈ ೨

ಧರಿಯೊಳು ನೃಪರಿಗೆ ಬಗಿಯದ
ಮದದಾನೆಯ ಭೇದಿಸಬಹುದೈ ।
ಸಿರಸಿನ ಹೂವಿನ ಯಸಳದಿ ವಜ್ರವನೆರೆ ಭೇದಿಬಹುದೈ ೩

ಮೇರುಪರ್ವತವನ್ನು ಸೂರ್ಯನಡಗದ
ಮುನ್ನ ಸುತ್ತಿರಬಹುದ್ಯೆ ।
ಆ ರಾವಣ ದುರ್ಯೋಧನ ತಿದ್ದದೆ
ಹೋದರು ಜನವಹುದ್ಯೆ ೪

ಕರಿಕಂಬಳಿ ಬಿಳಿದಾಗುವದೆಂಬುದ ಮರಳವನಲ್ಲ್ಯೆ ।
ಗುರು ಮಹಿಪತಿ ನಂದನು ಸಾರಿದ
ನುಡಿ ಸಿದ್ಧಾಂತಹುದ್ಯೆ ೫

## ೫೫೬

ಆವದಿದು ಜ್ಞಾನ ಪ

ಆವದಿದು ಜ್ಞಾನಾ ಬಲ್ಲವಿಕೆ ಜಾಣಾ ।
ಭಾವದುಗಮ ವರಿಯದವೆ ಜರಿದಿ ನಿಜ ಖೂನಾ ೧

ಅರಹು ಆಗಲೆಂದು ಕುರುಹ ದೋರಿದೊಂದು ।
ಕುರುಹವಿಡದ ಕೊಡ ತಿರುಗಿ ಅರಹು ಮರದಿಂದ ೨

ಕಲಿತು_ವಾಡುದು ಸೊಲ್ಲಾ ಗುಣಕ ಬಾಹುದಲ್ಲಾ ।
ಕಳೆದು ಅನುಮಾನ ಶಾಂತಿ ಸುಖವ ಪಡೆಯಲಿಲ್ಲಾ ೩

ಅರಿಯದಿದ್ದರ ಕೀಲು ಸಾಧು ಸಂತರು ಕೇಳು ।
ಗರುವತನವ ನೀಗಿ ಯಲ್ಲರ ಕಿರಿಯನಾಗಿ ಬಾಳು ೪

ತಂದೆ ಮಹಿಪತಿ ನಂದನ ಸಾರಥಿ ।
ಹೊಂದಿದವರ ನೋಡಿ ಕೊಡುವ ಮತಿ ಸ್ಫೂರ್ತಿ ೫

## ೫೫೭

ಆಶಾ ಪಾಶದಲಿ ಬಿದ್ದು ಘಾಸಿಯಾಯಿತು ಜೀವ
ವಾಸುದೇವನೆ ನಿಮ್ಮ ಆಶೆಗೆನ್ನ ಮನವಿಲ್ಲ ಪ

ಮಡದಿಯಾಗಲು ಮತ್ತೆ ಮನೆಯಾ ಮಾಡುವದಾಶಾ
ಒಡಗೂಡಲದು ಮಕ್ಕಳಾಗುವಾಶಾ
ಬಿಡದೆ ಕುಟುಂಬ ಪೋಷಣೆಯಾಗುವಾದಾಶಾ
ಕಡಲ ಶಯನಾ ನಿಮ್ಮ ಆಶೆಗೆನ್ನ ಮನವಿಲ್ಲ ೧

ಅನ್ನವಾಗಲು ವಸ್ತ್ರ ಅಲಂಕಾರದಾಶಾ
ಇನ್ನು ಮಕ್ಕಳ ಮುಂಜಿ ಮದುವಿಯಾಶಾ
ತನ್ನ ನೆಂಟರಸರಿಯಾ ಮಾಡುವದಾಶಾ
ಪನ್ನಗಾಶನವಾಹನಾಶೆಗೇ ಮನವಿಲ್ಲ ೨

ನಡೆವಕಾಲಕೆ ದೊಡ್ಡ ಕುದುರೆ ಏರುವದಾಶಾ
ಅಡರಲು ರಥದಿಂದ ಆಂದಣಾಶಾ
ಕಡಿಗೆ ತೀರದ ಹೊನ್ನು ಹಣದ ಸಂಗ್ರಹದಾಶಾ
ಪೊಡವಿಧರನೇ ನಿಮ್ಮ ಆಶೆಗೆ ಮನವಿಲ್ಲ ೩

ಒಂದೊದಗಲು ಮತ್ತೆ ಒಂದು ಬಯಸುದಾಶಾ
ಎಂದಿಗೇ ಸರಿಯದು ವಿಷಯದಾಶಾ
ಕುಂದಿದ ತನುವಿನ ಬಲವಾಗುವದಾಶಾ
ಇಂದಿರೇಶನ ಆಶೆಗೆನ್ನ ಮನವಿಲ್ಲ ೪

ಆಶೆಯೆಂಬಾ ನದಿಯ ಸುಳಿಯ ಬಿಡಿಸಿ ನಿಜ
ದಾಸರಾ ಸಂಗ ಮನವ ತಿದ್ದೀ
ಲೇಸಾಗಿ ಮಹಿಪತಿ ಸುತ ಪ್ರಭು ಭಕುತಿಯಾ
ಆಶೆ ಹೆಚ್ಚಿಸಿ ಎನ್ನ ದಯದಿ ಪಾಲಿಸೋ ದೇವಾ ೫

## ೫೫೮

ಇದರೊಳಾರ್ಯೆಯ್ಯ ನೀನು ಆತ್ಮಾ
ವದಗಿ ನಾನೆಂದ ಹಂಕರಿಸಿ ಓಯಂದೆಂಬೆ ಪ

ನೋಡುವವನೊಬ್ಬ ತಾ ಕೇಳಲರಿಯನು ನುಡಿಯ
ನೋಡಲರಿಯನು ಕೇಳುವವ ರೂಪವಾ
ಆಡುವವ ನುಡಿಯೊಬ್ಬ ಪರಿಮಳಂಗಳ ತಿಳಿಯಾ
ಅಡಲರುವಿಲ್ಲ ಘ್ರಾಣೇಂದ್ರಿಯವನೆ ೧

ಕೊಡುವವಗೆ ನುಡಿಯಿಲ್ಲ ನಡೆವವಗೆ ಕರವಿಲ್ಲಾ
ಬಿಡದೆ ಚೇಷ್ಟಿಸುವವಗ ರೂಪವಿಲ್ಲಾ
ಒಡನಾರು ಮೂರು ಇಪ್ಪತ್ತೈದು ಕೂಟದಲಿ
ಗಡಣದಿಂದಿಹ ಮನೆಗೆ ಕ್ಷೇತ್ರಜ್ಞನೊಬ್ಬನಿಹ ೨

ತನ್ನ ನಿಜ ತಾನರಿಯ ಧನ್ಯ ತಾನೆಂತೆಂಬೊ
ನಿನ್ನ ಬಲ್ಲವಿಕಿಗಿದು ನೋಡುಚಿತವೆ
ಇನ್ನ್ಯಾರೆ ತಂದೆ ಮಹಿಪತಿ ಬೋಧವನು ಸವಿದು
ಕಣ್ಣದರೆದಚ್ಯುತನ ನೆನೆದು ತಿಳಿಯೋ ೩

## ೫೫೯

ಇದ್ದರಿರಬೇಕು ಅನುದಿನಾ । ಒಳ್ಳೆವರ ಸಹವಾಸಾ ಪ

ಅಂಗಸಂಗಗಳಿಂದ । ಮಂಗಳೋತ್ಸಾಹವಾಗಿ ।
ಕಂಗಳಿಗಿದಿರಿಡುವದು ಉಲ್ಹಾಸಾ ೧

ಸಾರಿ ಬೀರಿ ಬೋಧವಾ । ದಾರಿದೋರಿ ಭಕ್ತಿಯಾ ।
ದೂರ ಮಾಡುವರು । ಭವಭಯ ಕ್ಲೇಶಾ ೨

ಗುರುವರ ಮಹಿಪತಿಸುತಪ್ರಭು ಸ್ಮರಣೆಯಾ ।
ಮರಹು ಮರೆಸುವರದರುದ್ದೇಶಾ ೩

## ೫೬೦

ಇದು ಯಾತರ ಬಾಳೋಣಾ ।
ಮನವೇಗತಿ ಹಾದಿಯಾ ನೆನೆದೇನಾ ಪ

ನರಜನ್ಮದಲಿ ಬಂದು ಪರಿಪರಿಯಲಿ ನೊಂದು ।
ಬರಿಯಾವಡಲ ಹೊರೆದೇನಾ ೧

ತಲೆವೂರಿ ತಪಗೂಡಿ ಹಲವ ಕಾಲವ ಮಾಡಿ ।
ನೆಲೆಯ ಲೇಶವ ಪಡೆದೇನಾ ೨

ತಂದೆ ಮಹಿಪತಿ ನಂದನ ಸಾರಥಿ
ಹೊಂದುವದು ಇನ್ನಾರೇನು ೩

## ೫೬೧

ಇದು ಯಾತರ ಜ್ಞಾನಾ ಪ

ವೇದವನೋದಿ ವಿವಾದವ ಮಾಡಿ ।
ಸಾಧಿಸಿದ್ಯಭಿಮಾನಾ ೧

ಬೆಟ್ಟವ ಶೋಧಿಸಿ ಕಷ್ಟದಿ ಇಲಿಯಾ ।
ನೆಟ್ಟನ ತೆಗೆದೇನಾ ೨

ಘನಗುರು ಮಹಿಪತಿ ಸ್ವಾಮಿಯ ನೆನೆದು ।
ಅನುದಿನವಿಡೀ ಧ್ಯಾನಾ ೩

## ೫೬೨

ಇದು ವಿವೇಕವಲ್ಲಾ ಪ

ಸತ್ಸಂಗವಾರೇ ನೀ ಬಯಸುವಿ ಮದಾ । ಮತ್ಸರಗಳಿದಿಲ್ಲಾ ೧

ಬೆಲ್ಲೊಳಗಿನ ಕಲ್ಲಿನಂತಂಗದೊಳಗೆ ಖುಳ್ಳತಣವೇವೆಲ್ಲಾ ೨

ಮಹಿಪತಿಜನ ನುಡಿಮನ್ನಿಸಿನ್ನಾರೇ । ಅಹಿತವಗುಣ ಸಲ್ಲಾ ೩

## ೫೬೩

ಇದುವೇ ಸಾಧಕ ವೃತ್ತಿಗಳು ।
ಇದೇ ಅಬಾಧಕ ಯುಕ್ತಿಗಳು ಪ

ಸದ್ಗುರು ಪಾದಕ ಸದ್ಭಾವದಿ ನಂಬಿ ।
ಹೃದ್ಗತ ಗುಜವನು ಪಡೆದಿಹನು ।
ಸದ್ಗತಿಕಾಂಕ್ಷಿತ ಹರಿ ಕೀರ್ತನೆಗಳ ।
ಉದ್ಗಾರ ಪ್ರೇಮದ ಮಾಡುವನು ೧

ಬಲ್ಲವನು ಕಂಡೆರಗಿ ಸಿದ್ಧಾಂತದಾ ।
ಉಳ್ಳಸದ್ಬೋಧವ ಕೇಳುವನು ।
ಮೆಲ್ಲನೆ ಮನನದಿ ಧ್ಯಾಸವು ಬಲಿಯುತ ।
ಕ್ಷುಲ್ಲರ ಮಾತಿಗೆ ಮನ–ವಿದನು ೨

ಅನ್ಯರ ಸದ್ಗುಣ ವಾರಿಸಿ ಕೊಳುತಲಿ ।
ತನ್ನವಗುಣಗಳ ಜರಿಸಿದವನು ।
ಸನ್ನುಡಿ ಬಿರುನುಡಿಗಳಕದೆ ಕುಜನರ ।
ಮನ್ನಿಸಿ ಶಾಂತಿಯನು ಜಡಿದಿಹನು ೩

ಬುದ್ಧಿಯ ಹೇಳಿದರೆ ನೀ ಹಿತ ಬಗೆಯದೆ ।
ತಿದ್ದುದರಂದದಿ ತಿದ್ದುವನು ।
ಇದ್ದಷ್ಟರೊಳಗೆ ಸಾರ್ಥಕದಲಿ ದಿನ ।
ಗದ್ದಿರ ಹೊರಿಯಲು ಉದರವನು ೪

ಸರ್ವರೊಳಗೆ ಬಾಗಿ ಶಮೆ ದಮೆಯಿಂದಲಿ ।
ಗರ್ವವ ತ್ಯಜಿಸಿಹ ಜನರೊಳಗೆ ।
ಸರ್ವಭಾವದಿ ಗುರು ಮಹಿಪತಿ ಸ್ವಾಮಿಯು ।
ಅರ್ವವ ಜಗಸನ್ಮತನು ೫

## ೫೬೪

ಇದು ಹೊಂದಿಕೆಯಲ್ಲಾ ಭಕುತಿಗೆ ಪ

ಗುರುವೆಂದಾಡುತ ನೆರೆನರನಂಬಿ ।
ಪರಗತಿ ಮಾರ್ಗವ ಎಂತು ನೀ ಕಾಂಬಿ ೧

ಕಲ್ಲಿನೊಳಗ ಹರಿಭಾವಿಸಿ ನುಡಿವೀ ।
ಇಲ್ಲಿ ನೋಡೆಂದರ ಸಂಶಯ ಹಿಡಿವೀ ೨

ನುಡಿಯಾಪಸಾರ ಸಂಗಡಿಯೊಳು ಬೆರೆದು ।
ಧೃಡಗೊಳ್ಳಲಿಲ್ಲ ವಿವೇಕದ ಸಂದು ೩

ಹಮ್ಮಿಲಿ ಕೇಳದೇ ಜ್ಞಾನದ ಗುಟ್ಟು ।
ಧರ್ಮ ಜರಿದು ಜನ ಹೋಯಿತು ಕೆಟ್ಟು ೪

ತಂದೆ ಮಹಿಪತಿ ಕರುಣಿಸದನಕಾ ।
ಎಂದಿಗೆ ದೊರೆಯದು ಸ್ವಾತ್ಮದ ಸುಖಾ ೫

## ೫೬೫

ಇದೇವೆ ನರ ಪಶು ಕಾಣಿರ್‍ಯೋ ।
ಇದೇ ಮನದ ಸ್ಥಿತಿ ನೋಡಿರ್‍ಯೋ ಪ

ಉದಯದಲೇಳುತ ಉದರದಿ ಧಾವತಿ ।
ಉದರ ತುಂಬಲು ನಿದ್ರಿಯ ಭರವು ।
ಮದದಲಿ ಭಯ ಕೊಟ್ಟಿಗೆಯಲಿ ಮಾಯದ ।
ಸದಮಲ ಪಾರದ ಬಂಧನವು ೧

ಮುನ್ನಿನ ಸಂಚಿತ ನೊಗ ಹೆಗಲಲಿ ಪೊತ್ತು ।
ಘನ್ನದುರಿತ ಘಸಣೆಯ ತಳೆದು ।
ತನ್ನ ಹಿತಾ ಹಿತ ಲೇಶವ ನರಿಯದೆ ।
ಕಣ್ಣೆವೆಯಿಕ್ಕದೆ ಡೋಕುವನು ೨

ಗುರುವರ ಮಹಿಪತಿ ನಂದನ ಸ್ವಾಮಿಯು ।
ಹೊರೆವ ವಡಿಯನೆಂಬ ಗುರುತರಿದೇ ।
ಧರಿಯೊಳು ತನ್ನನು ಅನುದಿನ ಕಾವವ ।
ಸಿರಿಯ ಮದಾಂಧನ ನಂಬಿಹುದು ೩

## ೫೬೬

ಇದೇವೆ ಬಂದದಾ ಖೂನವು ।
ಇದೇವೆ ಸಾರ್ಥಕ ಜನುಮವು ಪ

ಹೊತ್ತು ಹೋಗದ ಬೀದಿ ಮಾತುಗಳಾಡದೆ
ಚಿತ್ತಕ ಆಲೇಶ ತರಗುಡನು
ಉತ್ತಮರೊಳುಕೂಡಿ ಶ್ರೀಹರಿ ಮಹಿಮೆಯಾ
ನಿತ್ಯ ಕಥಾಮೃತ ಸೇವಿಪನು ೧

ಹಾಲವನೆರೆದರೆ ಸರಕನೆ ಕುಡಿಯದ
ಬಾಲಕನಂದದಿ ಈ ಮನವು
ಕಾಲಕಾಲಕ ಸದ್ಬೋದವ ಕೇಳಿಸಿ
ಮ್ಯಾಲ ಸ್ವಹಿತ ಕೊಡುವನು ೨

ಉದರದ ಧಾವತಿಗನುದಿನ ಬೆರತಿರ
ಇದರೊಳಗೆಚ್ಚರ ಹಿಡಿದಿಹನು
ಮದಮತ್ಸರಳಿದು ಗುರುಮಹಿಪತಿ ಪದ
ಪದುಮದಹಿಷ್ಠೆಯ ಜಡಿದಿಹನು ೩

## ೫೬೭

ಇನ್ನಾರೆ ತಿಳಿದು ನೋಡು ಮನರಾಯಾ ।
ನಿನ್ನ ಕಣ್ಣದೆರೆದು ಸ್ವ ಹಿತದ ಉಪಾಯಾ ಪ

ನಾನಾ ಜನ್ಮದಲ್ಲಿ ಬಂದು ಧರೆಯಲ್ಲಿ ಸುಖ ।
ವೇನು ಪಡೆದಿ ಹರಿಯ ಸ್ಮರಣೆ ಮರೆದಿಲ್ಲಿ ೧

ಶರಗೊಡ್ಡಿ ಬೇಡಿಕೊಂಬೆ ನಾನೀಗಾ ।
ಸ್ಥಿರವಾದರಿಲ್ಲ ದೂರ ಶಿವಯೋಗಾ ೨

ಇಂದು ನಾಳೆವೆನ್ನಬೇಡಿ ನಿಶ್ಚಯಾ ನಿನಗ ।
ಮುಂದ ಮತ್ತ ದೊರೆಯದಿದ ನರದೇಹಾ ೩

ತಂದೆ ಮಹಿಪತಿಸ್ವಾಮಿ ದಯದಿಂದ ।
ನಂದವ ಪಡೆದು ಗೆಲಿಯೋ ಭವದಿಂದಾ ೪

## ೫೬೮

ಇನ್ನಾರೆ ನೆರೆ ತಿಳಿ ನಿಜ ಹಿತವನು ಪ

ಇನ್ನಾರೆ ನೆರೆ ತಿಳಿ ನಿಜ ಹಿತವನು ।
ನಿನ್ನೊಳು ನೀನು ಮರಳು ಮನವೇ ।
ತನ್ನ ಹಿತವ ತಾ ನರಿಯದೆ ಮರೆದು ।
ದಣ್ಣನೆ ದಣಿವುದು ಸುಖದನುವೇ ೧

ಸಂತರಿಗೆರಗಿ ಶರಣವ ಮಾಡಿ ।
ಸದ್ಬೋಧ ಕೇಳಲು ಬೇಸರಿಕೆ ।
ಪಂಥದಿ ಲೆತ್ತ ಪಗಡಿ ಜೂಜೂ ಮಂಡಿಸಿ ।
ಎಂದಿಗೆ ದಣಿಯೇ ನೀ ವಂದಿನಕೆ ೨

ಒಂದರೆ ಘಳಿಗೆಯ ಹರಿಕಥೆ ಮಾಡುವ ।
ಸ್ಥಳದಲಿ ಕೂಡಲು ತೂಕಡಿಕೆ ।
ಛಂದದಿ ಹಾಸ್ಯ ಕುವಿದ್ಯಗಳಾಟವ ।
ನೋಡುದರಲಿ ಮಹಾ ಎಚ್ಚರಿಕೆ ೩

ಅನುದಿನ ಸಲಹುವ ಗುರು ಹಿರಿಯರ ಪಥ ।
ಅನುಸರಣಿಯೊಳಗೆ ನಿರ್ಭಯವು ।
ಧನ ಧರ್ಮದಂಧರ ಮನಸವ ಹಿಡಿಯಲು ।
ಕಾಶಿನ ಆಶೆಗೆ ಬೆಜ್ಜರವು ೪

ತೃಷೆಯದ ಕಾಲಕೆ ಬಾವಿ ತೋಡುವೆನೆಂಬಾ ।
ವನ ಪರಿಯಲಿ ಮತಿವಿಡಿಯದಿರು ।
ವಸುಧಿಲಿ ಮಹಿಪತಿ ನಂದನ ಪ್ರಭುವಿನ ।
ಶರಣ ಹುಗಲು ದಿನ ಗಳೆಯದಿರು ೫

## ೫೬೯

ಇವನೆವೆ ಮಾನವನು ನೋಡಿರೋ ಇವನೆವೆ ಮಾನವನು ಪ

ದಾವನು ಶ್ರೀ ಹರಿ ಪಾವನ ನಾಮವ
ಆವಾಗ ನೆನೆವುತ ಸಾವಧನಾದಾ ಅ.ಪ

ಹಿಂದಿನ ಪುಣ್ಯದಲಿ ನಾನೀಗ ಬಂದೆನು ನರದೇಹದಲಿ ।
ಮುಂದಾವ ಗತಿಗಳೋ ಛಂದದ ತಿಳಿಯದು ।
ಮಂದರ ಧರ ಸಲಹೆಂದು ಮೊರೆಯಿಡುವ ೧

ಇದ್ದಷ್ಟರೊಳುದಾವ ಶೇವೆಗೆ ಕದ್ದಿರ ತನುಮನವಾ ।
ಸಿದ್ಧರ ನೆರೆಯಲಿ ಶಿದ್ಧ ಬೋಧಾಮೃತ ।
ಬುದ್ಧಿಲಿ ಸೇವಿಸಿ ಗದ್ದಳವಾಗಾ ೨

ಗುರು ಮಹಿಪತಿ ಸ್ವಾಮಿ ಚರಣಕ ಶರಣೆಂದವನು ಪ್ರೇಮಿ ।
ಗುರು ವಚನವನಂದದಿ ಧರೆಯೊಳು ನಡೆಯುತ ।
ಗುರು ಭಕ್ತಿ ಜಾಗಿಸಿ ಗುರುತನಕ ಬಂದಾ ೩

## ೫೭೦

ಇವರೆವೆ ಧನ್ಯರಲ್ಲವೆ ಈ ಶರಣರು । ಈ ಶರಣರು ।
ಇವರೆವೆ ಧನ್ಯರಲ್ಲವೆ ಅವನಿಲಿ ಶರಣರು ಪ

ಗುರುವಿಗೆ ಶರಣೆಂದು । ಅವರ ಘನ ।
ಕರುಣಾನಂದವ ಪಡೆದು ।
ಗುರುವಚನದಿ ನಡೆದು । ಸದ್ಭಾವದಿಂದ ।
ತರಣೋಪಾಯವನರಿದು ।
ಜರಿವನ್ಯ ಹಂಬಲವ ಬೆರೆದು । ಭಕ್ತಿರಸದೊಳು ।
ನಿರಪೇಕ್ಷ ವೃತ್ತಿಯಿಂದಾ । ಚರರಿಸುತಿಹ ಶರಣರು ೧




ನಾನು ನನ್ನದುಯನುವಾ । ಮರದು ಭವ ।
ಕಾನನವನೆ ತೊರೆವಾ ।
ಮಾನುಭಾವರ ಸಂಗವಾ । ಪಡೆದು ನಿತ್ಯ ।
ತಾನಾರೆಂಬುದು ನರಿವಾ ।
ಸ್ವಾನಂದಬೋಧವನು ಮಾನ । ನೀಗಿ ಶ್ರವಣದಿ ।
ಸಾನುರಾಗದಲಿಂದ ತಾನುಂಬ ಶರಣರು ೨

ಹರಿಯೇ ಪರದೈವವೆಂಬುದು । ದೃಢ ಬಲಿದು ।
ಹರಿಯಲ್ಲರೊಳಗರಿದು ।
ಹರಿನಾಮ ನೆನೆನೆನೆದು । ಸುಪ್ರೇಮದಿ ।
ಶರೀರ ಭಾವನೆ ಮರೆದು ।
ಹರುಷದ ಗುಡಿಗಟ್ಟಿಬರುವ । ನಯನೋದಕದಿ ।
ಗುರುಮಹಿಪತಿಸ್ವಾಮಿ ಚರಣದ ಶರಣರು ೩

## ೫೭೧

ಉತ್ತೀರ್ಣವಾಗಲರಿಯರು । ತಮ್ಮ ।
ನಿತ್ಯನಿಂದಕ ದುರ್ಜನರಿಗೆ ಸುಜನರು ಪ

ಕೂಲಿಯ ಕೊಂಡು ವಸ್ತ್ರಂಗಳ ರಜಕನು ।
ಇಳಯೊಳು ವಗೆವನು ಕೈಗಳಿಂದಲ್ಲದೇ ।
ಮಲಿನವಗುಣ ಮೈಲಿಗೆ ಕಾಸು ಕೊಳದೇ ।
ಚಲಿಸದೆ ನಾಲಿಗೆಯಿಂದ ತೊಳೆವರಾಗಿ ೧

ತ್ರಯದ ಬಾಡಿಗಿಕೊಂಡು ಹೆಚ್ಚುಗಂಟವ ಕೊಳ್ಳ ।
ವೈವನು ಹೆಜ್ಜೆಯ ಪಯಣದ ಮುಂದಕ ।
ನಯದಿಂದಿವರ ನಿಂದೆ ದೋಷ ಭಾರವ ಹೊತ್ತು ।
ಭಯವಹಾನಂತ ಜನ್ಮವ ಸೋಸುವರಾಗಿ ೨

ಧರೆಯೊಳು ತಮ್ಮನ್ನ ತಾ ಉಂಡು ಬುಧರಿಗೆ ।
ಪರಮಸುಖವ ಕೊಟ್ಟು ದುಃಖವ ಕೊಂಬರು ।
ಗುರು ಮಹಿಪತಿಸುತ ಪ್ರಭು ಸ್ಮರಣೆಯನು ಬಿಟ್ಟು ।
ಇರಳ್ಹಗಲುದ್ಯೋಗ ಇದೇ ಮಾಡುವರಾಗಿ ೩

## ೫೭೨

ಉಬ್ಬುವದ್ಯಾಕೋ ಮದದಲಿ ಪ

ಎರಡು ದಿನದ ಛಂದ ಮರನ್ಯಾಡಿ ತೋರುತ
ಜರೆ ಬಂದು ನೂಕಲು ಮರಳುವ ಪ್ರಾಯದಿ ೧

ಲೆಕ್ಕವಿಲ್ಲದೆ ಗದ್ದಿಗಿಕ್ಕಿದ ಜಲದಂತೆ
ಪುಕ್ಕಟೆ ಜಾರುತ ದಕ್ಕದ ಧನದಿಂದ ೨

ಬುದ್ಧಿಲಿ ಬಹುಜನ ಗೆದ್ದನು ಮದದಿ
ಬಿದ್ದೋಗು ಕಾಲಕ ಸದ್ದಿಲ್ಲ ವಿದ್ಯದಿ ೩

ಉಬ್ಬುವ ಕೊಬ್ಬುವ ಹಬ್ಬುವ ಸುಖದಿಂದ
ಜಬ್ಬರ ಮಾಡುತಾ ರುಬ್ಬುವ ಕಾಲನು ೪

ತಂದೆ ಮಹಿಪತಿ ನಂದನು ಸಾರಿದಾ
ದ್ವಂದ್ವಗಳೆದು ಗೋವಿಂದನ ನೆನೆಯದೆ ೫

## ೫೭೩

ಎಲ್ಲಿಂದೆಲ್ಯರುಳಿದ್ಯೋ ಎಲೆ ಮನವೆ ಪ

ಎಲ್ಲಿಂದೆಲ್ಯುರುಳಿದ್ಯೋ । ಎಲೆ ಮನವೇ ।
ಬಲ್ಲತನದಲಿಗಿಡ ಕೊನೆಯ ನೇರಿ ಬಿದ್ದಂತೆ ೧

ದುರ್ಲಭ ನರದೇಹದಿ ಬಂದು । ಫುಲ್ಲನಾಭನ ನೆನೆಯದೆ ।
ಕ್ಷುಲ್ಲಗುಣದಲಿ ನಾನಾ ಹೀನ ಯೋನಿಯ ಮುಖಕ ೨

ಅಗ್ರಜನ್ಮದಲಿ ಬಂದು ಸಂತರಾನುಗ್ರಹವ । ಪಡೆದುಕೊಳ್ಳದೆ ।
ವ್ಯಗ್ರಬುದ್ಧಿಯಲಿ ಅತಿ ಶೂದ್ರ ನಡುವಳಿವಿಡಿದು ೩

ಹರಿಯೆಂಬ ನಂಟನಿರಲು ಬೇಕಾದ ।
ವರಗಳನು ಪಡಕೊಳ್ಳವೆ ।
ಶರೀರಾಭಿಮಾನಿ ಗೆಳೆತನ ಕಟ್ಟಿ ವಿಷಯಕ್ಕು ೪

ತಂದೆ ಮಹಿಪತಿ ಸ್ವಾಮಿಯಾ ಮೊರೆ ಹೊಕ್ಕು ।
ಬಂದ ಸಾರ್ಥಕವ ಮಾಡು । ಇಂದಿನೆಚ್ಚರ ನಾಳೆ
ಸಂಧಿಸಿದು ನಿಜದಿಂದ ೫

## ೫೭೪

ಎಲೆ ಮನವೆ ಸಲೆ ನಿನ್ನ ಮರೆವದು ಗುಣವೇ ಪ

ಹರಿಯೋ ಮರವಿನ ಮುಸುಕಿದೆ ಮರೆಯೋ ।
ಸಿರಿ ಸೌಖ್ಯ ಮೃಗಜಳ ಪರಿಯೋ ।
ಚರವೆಂಬ ಹಂಬಲ ಮರಿಯೋ ।
ಪರಿ ಪರಿ ವಾಸನೆಯ ಜರಿಯೋ ।
ಪ್ರಾರಬ್ಧ ನಿಜ ವೆಂದರಿಯೋ ।
ಮೂರು ತಾಪ ಮೊನೆ ಮುರಿಯೋ ।
ಅರವಿನ ನಯನವದೆರಿಯೋ ।
ಗುರು ಪಾದ ಪದ್ಮಕ ಬೆರೆಯೋ ೧

ತಿಳಿಯೋ ಇಳಿಯೊಳು ಸತ್ಪಥ ನೆಲಿಯೋ ।
ಕಳೇವರ ಸ್ಥಿರ ಬೊಬ್ಬುಳಿಯೋ ।
ನಲವಾರು ಅರಿಗಳ ನಳಿಯೋ ।

ಬಲಿತಿಹ ಹಮ್ಮಿಲ ಕಳಿಯೋ ।
ಬಳಲಿಪಾಗುಣ ಮಲ ತೊಳಿಯೋ ।
ಬಲು ಶಾಂತಿ ಹೃದಯದಲಿ ತಳೆಯೋ ।
ಒಲುವಂತೆ ಗುರುನಡಿ ಕಲಿಯೋ ।
ಸಲಹುವಾಗರದು ದಯ ಮಳಿಯೋ ೨

ಜಡಿಯೋದೃಢ ಭಾವನೆಯನು ಹಿಡಿಯೋ ।
ಕೆಡುವ ಭಾವ ಮೂಲವ ಕಡಿಯೋ ।
ತಡಿಯದೆ ಮಹಿಪತಿ ದಯ ಪಡಿಯೋ ।
ಅಡಿಗಳಾಶ್ರಯವನು ಹಿಡಿಯೋ ।
ಒಡೆಯನಾಜ್ಞೆಯಂದದಿ ನಡೆಯೋ ।
ಕಡು ಪ್ರೀತಿಲಿ ಸ್ತುತಿ ನುಡಿಯೋ ।
ಮಡಿದ್ದುಟ್ಟುವ ಜನ್ಮದ ಮುಡಿಯೋ ।
ಒಡನ ಹಾದಿದರಿಂದ ಕಡಿಯೋ ೩

## ೫೭೫

ಎಲೆ ಮನಾ ವ್ಯರ್ಥಗಳೆವರೇ ಜನುಮವನು ।
ನೆಲಿಯ ನಿನ್ನರುವದಾ ಹೊಲಬು ಮರೆದು ಪ

ಇಳಿಯೊಳಗ ನರದೇಹದಲಿ ಜನಿಸಿ ಕೊಡುವದು ।
ಸುಲಭವಲ್ಲವೊ ಹೋದ ಬಳಿಕ ನಿನಗದು ಮುಂದ ಅ.ಪ

ಮೇದಿನಿಯೊಳಗ ಮಿಗಿಲಾದ ಜನ್ಮದಿ ಬಂದು।
ಐದಿದಾವರ್ಣ ಕರ್ಮಾಧರಿಸಿ ಮಾಡುತಲಿ ।
ಗೈದು ನಿತ್ಯಾನಿತ್ಯ ವೈದಿಕ ವಿಚಾರವನು ।
ಆದಿ ಪುರುಷನ ಕಾಂಬ ಹಾದಿ ಕೂಡಿ ।
ಖೇದವನು ಕುಡುವ ವಿವಾದ ಗುಣವನೆ ನೀಗಿ ।
ಮೋದದಲಿ ಶರಣ್ಹೊಕ್ಕು ಸಾಧು ಜನರನು ಸರಿಸಿ ।
ವೇದಾಂತ ಬ್ರಹ್ಮ ಸೂತ್ರಾದಿ ವಾಕ್ಯಾರ್ಥವನು ೧

ಬೋಧೆಯಲಿ ಪಡೆದು ಜ್ಞಾನೋದಯ ಕಾಣದೆ
ದುರಿತಢೆರಿಯುಳ್ಳ ಭವ ಶರಧಿಯನು ಗೆಲಲಾಗಿ ।
ಶರಣ ಜನರಿಗೆ ತೆಪ್ಪ ಪರಿಯಂದಾತಾಗಿಹ ।
ಹರಿನಾಮವ ನೆನೆದು ಹರಿಧ್ಯಾನಗೈವುತಲಿ ।
ಹರುಷದಲಿ ಪದಿನಾರು ತೆರ ಪೂಜಿಸಿ ।
ಪರಮ ಸದ್ಭಾವದಲಿ ಗುರುಡಿಂಗರ ಮೇಳದಲಿ ।
ಭರದಿ ತಾಳದಂಡಿಗೆಯ ಕರದೊಳಗ ತಾ ಪಿಡಿದು ।
ಶರೀರ ಭಾವನೆ ಮರೆದು ಭರಿತ ಪ್ರೇಮಿತನಾಗಿ ।
ಇರಳು ಹಗಲು ಪಾಡುತಲಿ ಹರಿಭಕ್ತನಾಗದೇ ೨

ವನಧಿಯೊಳು ಥೆರೆಸಂಗ ಧನುಮತದಿದೋರ್ವ ।
ಗುಳ್ಳಿಯ ಪರಿಸೇವೆಯೀತನು ವೆಂದು-ದರಿಯು ।
ಆನದೊಳಗ ಉತ್ಕೃಷ್ಟ ತನದಿ ಮೆರೆಸ್ಯಾಡುತಿಹ ।
ಕನಕದಧಿದೇವಿ ಕಿವಿಯನು ಬೀಸುವಾಗ ।
ಅಣುಗ ಕರಿಯಂತೆ ಅರಕ್ಷಣದವಳು ಯಂದು ಅತಿ ।
ಹೆಣಗುತಿಹ ಸಾಯಾಸವನೆ ತ್ಯಜಿಸಿ ತಾ ದೊರಕಿ ।
ಧನಿತದರಿಂತುಷ್ಟವನು ಕರಿಸಿ ದೃಢದಿಂದ ।
ಘನ ನಂಬು ಗುರು ಮಹಿಪತಿ ಚರಣ ಬಿಡದಂತೆ ೩

## ೫೭೬

ಎಂತು ಎನ್ನ ತಾರಿಸುವಿಯೋ ತಿಳಿಯದಿಂದಿಗೆ
ಕಂತುಪಿತನೆ ಮುಕುತಿ ಮಾರ್ಗ ಹೊಂದುವೆನೆಂದಿಗೆ ಪ

ಓದಿತತ್ವ ಶಾಸ್ತ್ರಗಳನು ಜನರಿಗ್ಹೇಳುವೆ ನಾನು
ಮೇದನಿಯೊಳು ಬಲ್ಲವನೆಂಬ ಗರ್ವ ತಾಳುವೆ
ಸಾಧು ಸಂತರ ನಡಿಯ ನುಡಿಯ ಮಹಿಮೆ ಕೇಳುವೆ ಮತ್ತೆ
ಹಾದಿತಪ್ಪಿ ಕುಜನ ವೃತ್ತಿಯಲ್ಲಿ ಬಾಳುವೆ ೧

ಸ್ವಾದ ಲಂಪಟ ದುರ್ವಿಷಯ ಬಿಡದ ಸಕ್ತನು
ಸಾಧುನಿಂದಕನಾದ ಕಪಟ ಕಲುಷ ಚಿತ್ತನು
ಸಾಧಕಗುರು ಹಿರಿಯರ ಅನುಸರಿಸಿದ ಭಕ್ತರು
ಸಾಧಿಪಕರ್ಮ ವೃತ್ತಗಳಲ್ಲಿ ಡಂಭಯುಕ್ತನು ೨

ಒಂದು ಎರಡು ಹೇಳಲೇ ಎನ್ನತಪ್ಪವಾ ಹೃದಯ
ಮಂದಿರ ಮೊಳಗಿಲ್ಲವಾಯಿತು ಜ್ಞಾನ ದೀಪವಾ
ನೊಂದು ಬೆಂದು ತಾಪತ್ರಯದಿ ಸುಖದ ರೂಪವಾ ಬಗೆವೆ
ನಿಂದು ಒಮ್ಮಿಗ್ಯಾರ ವಿಡಿಯೆ ಪಶ್ಚಾತ್ತಾಪವಾ ೩

ಪತಿತಪಾವನ ದೀನೋದ್ಧರಣನೆಂಬ ಬಿರುದವಾ
ಕ್ಷಿತಿಯೊಳಿನ್ನು ತಾಳಿದುದರ ಕೇಳು ಮಾಧವಾ
ಮತಿವಿವೇಕದಿಂದೆ ಹಚ್ಚಿ ಭಕುತಿ ಸ್ವಾದವಾ
ಗತಿಯ ಕೊಟ್ಟ ಕರಿಯೆ ನಾನು ನಿನ್ನ ಮರೆದವಾ ೪

ನಿನ್ನ ಭಕ್ತರ ಮನಿಯ ನಾಯಿ ಯಂದು ಎನ್ನನು
ಮುನ್ನಿನವರು ಉಂಡ ವೆಂಜಲ ಶೇಷವನ್ನನು
ಇನ್ನು ಇಕ್ಕಿಸಿ ಸಲಹಬೇಕು ಮೂಢ ಚಿನ್ನನು
ಘನ್ನ ಗುರು ಮಹಿಪತಿಸ್ವಾಮಿದಯ ಸಂಪನ್ನನು ೫

## ೫೭೭

ಎಂತು ದೊರೆವುದೋ ಇಂತು ನರದೇಹ
ಮುಂದೆ ಬಾಹ ದಿನ್ನೆಂದಿಗೆ
ಇಚಿದು ಕರುಣಿಸಿ ಸಲಹುಯನ್ನ ಮು।
ಕುಂದ ನಿನ್ನಂಘ್ರಿಗಳ ತೋರಿಸಿ ೧

ಮೊದಲೇ ದುರ್ಲಭ ಮನುಷ್ಯಾಂಗವು
ಅದರೊಳುತ್ತಮ ವರ್ಣದಿ
ಉದಿಸಿ ಭಗವಂತಾಂಘ್ರಿ ದರುಶನ
ವದಗಿ ಗತಿಗೈದಿಸುವ ಜನುಮವು ೨

ಗುರುಹಿರಿಯರೆಂದೆರಿಸಿ ಅವರನು
ಸ್ಮರಿಸಿ ಭಕ್ತಿಗೆ ಸೇರಿಸಿ
ಮರೆಸಿ ಅನ್ಯವ ಬೆರೆಸಿ ನಿಜದೊಳು
ತರಿಸಿ ತಾರಿಸುತಿಹ ಜನುಮವು ೩

ಹರಿಯ ಲಾಂಛನ ಪೌಂಡ್ರವು
ಕೊರಳು ತುಳಸಿಯ ಮಾಲೆಯಾ
ಧರಿಸಿದಂಡಿಗೆ ಪಿಡಿದು ಮಾಧವ
ಚರಿತ ಪಾಡುತ ನಲಿವ ಜನುಮವು ೪

ತನ್ನವರ ಪರಿಚಾರಕೆನಿಸುವ
ಘನ್ನ ಬಿರದಿಗೆ ಪಾಲಿಸೀ
ಸನ್ನುತನೆ ಗುರುಮಹಿಪತಿ ಪ್ರಭು
ನಿನ್ನ ವಲುಮಿಂದಾದರಾಗಲಿ ೫

## ೫೭೮

ಎಂದೂ ಹಿಡಿಯದಿರು ಗರ್ವಾ । ಗೋ
ವಿಂದನಲೀಲೆಯ ಕಾಣೊ ಸರ್ವಾ ಪ

ಕ್ಷಿತಿಯೊಳಧಿಕವೆನ್ನ ಕುಲವು । ಗುಣ ।
ವತಿ ಸುಲಕ್ಷಣೆಯಾದಾ । ಸತಿಯಳ ವಲವು ।
ಸುತನಲ್ಲಿ ಗುಣ ನಿಶ್ಚಲಿಪು । ಯನ ।
ಗತಿಶಯ ಭಾಗ್ಯದ ಧನ ಧಾನ್ಯ ಒಲವು ೧

ಎಲ್ಲರೊಳಗ ಅಭಿಮಾನಿ । ಶಾಸ್ತ್ರ ।
ದಲ್ಲಿ ವಿಚಾರಿಸಿ ನಾನೆವೆ ಜ್ಞಾನಿ
ಬಲ್ಲಿದ ಯೌವ್ವನ ತ್ರಾಣಿ । ಯನ್ನು ।
ಸೊಲ್ಲು ಸೊಲ್ಲಿಗ್ಹೇಳುವ ಕವಿತೆಯ ವಾಣಿ ೨

ಸುಂದರವಾದ ಮಂದಿರವು । ಯನ ।
ಗೊಂದು ಕೊರತೆಯಿಲ್ಲಾವೆಂಬುದೀ ಮರವು
ಹೊಂದದೆ ಬಾಗಿರೆಚ್ಚವು । ಗುರು ।
ತಂದೆ ಮಹಿಪತಿ ಬೋಧಿಸಿದರಹು ೩

## ೫೭೯

ಏನಾದರೇನು ಪ

ತನು ವೈರಾಗ್ಯದಲ್ಲಿಟ್ಟನವರತಾ ।
ಅಣಿಮಾ ಸಿದ್ಧಿ ಅರತಾ ।
ಘನಗುರು ಜ್ಞಾನವಾ ಮರತು ೧

ಓದಿಕಿಯಲಿ ನಿಪುಣಾದವನು ಯಲ್ಲಾ ।
ವೇದಾರ್ಥ ಮಾಡಬಲ್ಲಾ
ಸಾಧುರಾ ಮಾರ್ಗವೆ ತಿಳಿಲಿಲ್ಲಾ ೨

ಗುರು ಮಹಿಪತಿ ಸುತ ಪ್ರಭುವಲಿಯದೆ ।
ಪರಗತಿ ಸಾಧಿಸುವದೆ ।
ಬರೆ ವ್ಯರ್ಥಡಂಭದಿ ಮೆರೆವುದೇ ೩

## ೫೮೦

ಏನು ಮಾಡಿದರೇನು ನಾನಾ ಸಾಧನೆಗಳನು ।
ಜ್ಞಾನಿಗಳ ಕೂಡದನಕಾ ಮರುಳೇ ಪ

ಸಕಲ ಸಾಮಗ್ರಿಯನು ತಂದಿರಲೇನು ಪಾ ।
ಕಕೆ ವಹ್ನಿ ಇಲ್ಲದನಕಾ ಮರುಳಾ ೧

ಪ್ರಕಟವಾಗಿರಲು ನಯನಾದಿಂದ್ರಿಯಗಳಿಗೆ ಐಂ ।
ದ್ರಿಕ ಬೆಳಗವಿಲ್ಲದನಕಾ ಮರುಳೇ ೨

ಹಸನ ಭೂಮಿಯ ಮಾಡಿ ಬೀಜ ಉಡಿಗಟ್ಟಿರಲು ।
ವಸೆದು ಮಳೆಯಾಗದನಕಾ ಮರುಳೇ ೩

ಪ್ರಕಟಿಸಿದ ಅನ್ನ ಭಕ್ಷದಿ ಶಾಖಗಳಿರಲು ।
ಯಶವಾಜ್ಯ ಬಡಿಸದನಕಾ ಮರುಳೇ ೪

ತುಂಬಿ ಕುಳಿತೇನು ದೊಡ್ಡವರೆಲ್ಲಾ ನಾವಿಯೊಳು ।
ಅಂಬಿಗನು ಬಾರದನಕಾ ಮರುಳೇ ೫

ನಂಬಿ ಗುರು ಮಹಿಪತಿಸುತಸ್ವಾಮಿ ಶ್ರೀಚರಣ ।
ದಿಂಬವನು ಪಡೆಯದನಕಾ ಮರುಳೇ ೬

## ೫೮೧

ಏನುಮಾಡಿದಿ ಬಂದು ಈ ನರದೇಹದಿ ।
ಜ್ಞಾನ ಸಾಧನ ಹೇಳು ಪ

ನಾನಾರೆಂಬುದು ನಿಜ ಖೂನ ಮರೆದು ಭವ ।
ಕಾನನವಿಡಿದೆಲ್ಲೋ ಅ.ಪ

ತನ್ನ ಭಜಿಸಲೆಂದು ಮಾನವ ಜನುಮದಿ ।
ನಿನ್ನ ತಂದನಲ್ಲೋ ಪ್ರಾಣೀ ।
ಪನ್ನಗಶಯನನ ಘನ್ನ ವಿಶ್ವಾಸದ ।
ಲಿನ್ನು ವಿರಹಿತಾದೆಲ್ಲೋ ಪ್ರಾಣಿ ೧

ಕಂಡಪಥಕ ಹರಿದಂಡಲೆಯದೆನೆಲೆ ।
ಗೊಂಡವರೊಳು ಕೂಡೋ ಪ್ರಾಣಿ ।
ಖಂಡಿಸಿ ಸಂಶಯ ಪುಂಡರೀಕಾಕ್ಷನ ।
ಕೊಂಡಾಡುತ ಬಾಳೋ ಪ್ರಾಣಿ ೨

ಹಿಂದಿನ ಮರವಿಗೆ ಇಂದಿಗೆ ನೀರೆರಿ ।
ಮುಂದ ಸ್ವಹಿತ ನೋಡೋ ಪ್ರಾಣಿ ।
ತಂದೆ ಮಹಿಪತಿ ನಂದನ ಪ್ರಭುದಯ ।
ದಿಂದ ಸಾರ್ಥಕ ಮಾಡೋ ಪ್ರಾಣಿ ೩

## ೫೮೨

ಏನು ಸವಿಯೋ ಮಾತಿನ್ನೇನು ಸವಿಯೋ ।
ಶ್ರೀನಾಥನೆಚ್ಚರ ಪಡೆವಾ ಮಾನುಭಾವರ ಸ್ಥಿತಿ ಸಂಗತಿಯಾ ಪ

ನುಡಿಸವಿಯೋ ವೇದಾಂತದಾ ।
ನಡಿಸವಿಯೋ ಸಿದ್ಧಾಂತದಾ ।
ದೃಢ ಸವಿಯೋ ನೈರಾಶ್ಯದಾ ।
ಕುಡ ಸವಿಯೋ ಉಪದೇಶವಾ ೧

ನೋಟ ಸವಿಯೋ ಸಮಭಾವದಾ ।
ಧಾಟಿ ಸವಿಯೋ ಭಕ್ತಿ ಸುಖದಾ ।
ಮಾಟ ಸವಿಯೋ ಹರಿ ಪ್ರೇಮದಾ ।
ಊಟ ಸವಿಯೋ ನಾಮಾಮೃತದಾ ೨

ತ್ಯಾಗ ಸವಿಯೋ ವಿವೇಕದಾ ।
ಭೋಗ ಸವಿಯೋ ನಿರ್ವಿಷಯದಾ ।
ಶ್ರೀ ಗುರು ಮಹಿಪತಿ ಸ್ವಾಮಿ ।
ಯೋಗ ಭೋಗವೆರಡಲ್ಲಿರುವಾ ೩

## ೫೮೩

ಏನು ಹೇಳಿದರೇನು ಹೀನ ಮನಕ ।
ತಾನು ಎಚ್ಚರ ಹಿಡಿಯ ದನಕಾ ಪ

ಬೂದಿಯೊಳಗ ಹೋಮ ಮಾಡಿದಂತೆ ।
ಬೋಧಾನುಗ್ರಹ ಕಳವದು ಮರೆತಕೆ ೧

ಹರಿ ಕೀರ್ತನೆ ಇರಲಿಲ್ಲಾ ।
ಬರಡು ಮಾತಿಗೆ ಸುಖ ಪಡುದಲ್ಲಾ ೨

ಒಮ್ಮೆಯಾದರೂ ಹರಿ ಹರಿಯಂದು ।
ಝುಮ್ಮೆನೆವೆ ಪಶ್ಚಾತಾಪ ಬಾರದೆಂದು ೩

ಗಾಳಿಯಂತೆ ಓಡಾಡುವದು ನೋಡಿ ।
ಕಾಲೂರಿ ನಿಲ್ಲದು ಮತಿಗೇಡಿ ೪

ತಂದೆ ಮಹಿಪತಿ ದಯವಾಗದನಕ ।
ಒಂದು ಹಿಡಿಯದು ಸ್ವಹಿತ ವಿವೇಕಾ ೫

## ೫೮೪

ಏನೆಂದ್ಹೇಳಲಿ ನಾನು । ಸಾಧುರಾ ಮಹಿಮೆಯನು ।
ಮನವ ವುನ್ಮನಮಾಡೀ । ಘನಸುಖದೊಳುಕೂಡಿ ।
ಆನಂದದೊಳಗಿಹನು ಪ

ಬಹುಮಾತವನಾಡಾ । ಮೌನವಹಿಡಿದುಕೂಡಾ ।
ಸಹಜದಿ ನುಡಿವಂದಾ । ನಾಡಿದ ರದರಿಂದಾ ।
ಸ್ವಹಿತದ ಸುಖನೋಡಾ ೧

ಅರಿಯಾನಂತಿಹನಲ್ಲಾ । ಅರಿವನು ಉಳಿದಿಲ್ಲಾ ।
ಅರಹು ಮರಹು ಮೀರಿ । ಕುರ್ರುವಿನ ಮನೆಸೇರಿ ।
ಅರಿಸುಖ ಸಮವೆಲ್ಲಾ ೨

ಸಾಧುರ ನಿಜವೆಲ್ಲಾ । ಸಾಧು ಆದವ ಬಲ್ಲಾ
ಸಾಧುರ ವೇಷದಿ । ಉದರವ ಹೊರೆಯುತಾ ।
ಬೋಧಿಸುವದಲ್ಲಾ ೩

ಆಶೆಯಂಬುದು ಬಿಟ್ಟು ವೇಷವ ಕಳೆದಿಟ್ಟು ।
ಲೇಸಾಗಿ ಗುರುವರ । ಮಹಿಪತಿಸ್ವಾಮಿಯಾ ।
ಧ್ಯಾಸದಿ ಬೆರೆತಿಹನು ೪

## ೫೮೫

ಏನೋ ಪ್ರಾಣಿ ಪ
ಏನೋ ಪ್ರಾಣಿ ಮುಂದಗಣೀ । ಹೀನಗುಣಗಳ ಶ್ರೇಣಿ ।
ತಾ ನಳಿಯಂದದಿ ಮಾಣಿ ನೀ ನುಡಿನಮ್ರತವಾಣಿ ।
ಸ್ವಾನಂದ ಜನ್ಮಕ ಬಂದೆನಿಸಿ ಕೊಂಬುದು ।
ವಿಹಿದುತ್ತಮ ಜ್ಞಾನಿ ೧

ಕೇಳು ಕೇಳಿಧಾಂಗ ಬಲು ಹೇಳಿದಾಂಗ ಮೇಳು ।
ತಿಳಿಗುರು ಭಕ್ತಿಯ ಮೇಲು ಬಲು ವಿವೇಕವ ತಾಳು ।
ಭಲದ ಮದಮತ್ಸರ ಶೀಳು ತಳಿಮನ ದುರ್ವೃತ್ತಿಗಳು ।
ಇಳಯೊಳು ಶ್ರೀ ಗುರುಪಾದಕ ನಂಬಿ ।
ವಿಡಿಯೋ ಪಂಥವಾ ಸೇರು ೨

ಸಾರಾ ಸಾರದ ವಿಚಾರ ಅರಿಯೋ ಪಾರಾವಾರಾ ।
ಜರಿ ಹಂ ಮಮತೆಯ ದೂರಾ ಸರಿ ನಗಿ ಆರಿ ಮಿತ್ರರಾ ।
ಮರೆಯೋ ನಿಂದೆಯ ಪರರಾ ತೋರದೇ ವಾಗ್ವಿಸ್ತಾರಾ ।
ತಾರಿಸುವನು ಈ ಪರಿ ನುಡಿಯಲಿ ।
ಮಹಿಪತಿಸುತ ಪ್ರಭು ಉದಾರಾ ೩

## ೫೮೬

ಕಳ್ಳನ ಹೆಜ್ಜೆಯನು । ಜಗದೊಳು ಕಳ್ಳನೇ ತಾ ಬಲ್ಲ ।
ಎಲ್ಲರಿಗಿದು ತಾನು । ಭೇದಿಸಿ । ನೋಡಲು ಅಳವಲ್ಲಾ ಪ

ಮನೆಯೊಳಗಿನ ಮನಿಯಾ । ಮುಂದಿನ ।
ನಡುಮನಿಯೊಳು ಬಂದಾ ।
ಮನ ಪವನರು ಕೂಡಿ ನಿಜ ।
ಮಂದಿರಕನ್ನವ ಕೊರೆದಾ ೧

ಸ್ವಪ್ರಭೆಯಲ್ಲಿ ಮೆರೆವಾ । ಅಲ್ಲಿಯ ಚಿದ್ರತ್ನವ ಕದ್ದಾ ।
ಅಪ್ರತಿ ಸುಖದೂಟಾ । ತನ್ನೊಳು ।
ಸ್ವಾನುಭವದಿ ಮೆದ್ದಾ ೨

ಕಳ್ಳರ ಸಂಗತಿಯಾ । ಮಹಿಪತಿ । ನಂದನ ತಾ ಮಾಡಿ ।
ಕಳ್ಳನು ಭವಕದಾ । ಹರಿನಾಮವ ।
ಕದಿಯುತ ನೋಡಿ ೩

## ೫೮೭

ಕೇಳಿ ನಗಬಹುದು ಮಜಾತ್ಮರು ।
ಕೇಳಿ ನಗಬಹುದು ।
ಹೋಲಿಕೀಲ್ಯಾಡುವ ಜನದ ಜ್ಞಾನದ ನುಡಿ ಪ

ದಂಭಮಾನದಲಿ । ಮನಸಿನ ।
ಹಂಬಲ ಘನವಿರಲಿ ।
ಥಂಬಿಸಿ ಕರ್ಮವ । ಸರ್ವಂ ಬ್ರಹ್ಮಮಯ ।
ವೆಂಬುದು ತೋರುವರಾ ನುಡಿಗಳಾ ೧

ಆಶಾಪಾಶಗಳು । ವಿಷಯದಿ ।
ಲೇಸಿಗೆ ಬಿಗಿದಿರಲು ।
ನಾಶಿವ ನಾ ಬ್ರಹ್ಮನೆಂ । ದೊದರುತ ನಾನಾ ।
ವೇಷವ ಧರಿಸುವರಾ । ನುಡಿಗಳು ೨

ಚಿನುಮಯ ನಿಜ ಸುಖವಾ । ಕಂಗಳ
ಕೊನಿಯಲಿ ದೋರಿಸುವಾ ।
ಘನ ಗುರು ಮಹಿಪತಿ ಪ್ರಭು ಕರುಣಾನಂದ ।
ಅನುಭವಿಸಿದ ಲ್ಯಾಡುವ ನುಡಿಗಳಾ ೩

## ೫೮೮

ಕೇಳು ಒಳ್ಳೆವರ ಕೂಡಾ ನಿನ್ನ ಹಿತವ ಪ್ರಾಣೀ ।
ತಾಳಿ ನರದೇಹದಿಂದ ಮಾಡುವರೇ ಹಾನಿ ಪ

ಮುಕ್ತಿನಂಥಾ ದಿನವಿದು । ಸಿಕ್ಕದಣ್ಣಾ ಮುಂದ ।
ಚಿತ್ತ ಸ್ಥಿರವಾ ಮಾಡಿ ಹರಿಯ ನೆನೆಯಬೇಕು ಇಂದ ೧

ಬಾಲನಾಗಿ ಕೆಲವು । ದಿನದಿಂದ ಯೌವನದಿ ।
ಮ್ಯಾಲ ಯೆಚ್ಚರವ ಬಿಟ್ಟು । ಹರಿಗೆ ವಿಮುಖನಾದಿ ೨

ಜರೆಯು ಬಂದ ಕಾಲದಲ್ಲಿ । ತನುವು ತನ್ನದಲ್ಲಾ ।
ಬರಿದೆ ಹಂಬಲಿಸಿದರಾಗ । ಸರಕು ಮನೆಯೊಳಿಲ್ಲಾ ೩

ಈಗಳವೆ ಯಚ್ಚರಿತು । ಹರಿಯಾ ಬಲಗೊಂಡು ।
ನೀಗಿ ಕಳಿಯೋ ಭವಭ್ರಮದಾ । ಅವಗುಣವಾ ಹಿಂಡು ೪

ಶರಣು ಹೋಗುವಾ । ಭಾವಭಕ್ತಿಯಲ್ಲಿ ದಾವಪ್ರೇಮಿ ।
ತಾರಿಸುವಾ ಗುರು ಮಹಿಪತಿಸುತ ಸ್ವಾಮಿ ೫

## ೫೮೯

ಕೇಳು ಕೇಳು ಕೇಳು ಮನವೇ ನಿನ್ನ ಸ್ವಹಿತವನು ಪ

ಕೇಳು ಕೇಳು ಕೇಳು ಮನವೇ ನಿನ್ನ ಸ್ವಹಿತವನು ।
ಬಾಳು ಬಾಳು ಬಾಳು ಗಳದು ಭವದ ಬೆಜ್ಜರವನು ೧

ನೀಗು ನೀಗು ನೀಗು ನೀ ದುಸ್ಸಂಗಾ ಜಗದೊಳಗೆ ।
ಬೇಗ ಬೇಗ ಬೇಗ ಹೊಕ್ಕು ಶರಣಾಗು ಗುರುವಿಗೆ ೨

ಬಾಗು ಬಾಗು ಬಾಗು ಗರ್ವ ತ್ಯಜಿಸಿ ಜಗದೊಳಗೆ ।
ಸಾಗು ಸಾಗು ಸಾಗು ಸಿಕ್ಕಿದೆ ಆರು ಅರಿಗಳಿಗೆ ೩

ದಾರಿ ದಾರಿ ದಾರಿ ವಿಡಿದು ನಡೆಂದ ಹಿರಿಯರಾ ।
ಸೇರಿ ಸೇರಿ ಸೇರಿ ಸಂತ ನೆರಿಯ ನಿರಂತರಾ ೪

ನಂಬಿ ನಂಬಿ ನಂಬಿ ನಂದನಸ್ವಾಮಿ ಮಹಿಪತಿಯಾ।
ಇಂಬು ಇಂಬು ಇಂಬು ಪಡೆದರಹುದು ನಿಜಗತಿಯಾ ೫



## ೫೯೦

ಕೇಳು ಹಿತವಾ ಬಾಳು ಮನವೇ ಸಾಧು ಸಂಗ ಮಾಡು ।
ಹೇಳತೀರದ ಸ್ವಾನಂದದ ಸುಖಭಾವಿಕಗ ಬಲು ಪಾಡು ಪ

ಹೀನ ಕೀಟಕ ಸಂಗದಿಂದ ಭೃಂಗಿಯಾಗಲಿಲ್ಲಾ ।
ತಾನು ಕಬ್ಬಿಣ ಪರಸವ ಮುಟ್ಟಿ ಚಿನ್ನವಾದುದಲ್ಲಾ ೧

ಹಳ್ಳ ಕೊಳ್ಳ ಬಂದು ಕೂಡಿ ಗಂಗೆಯಾಗುವಂತೆ ।
ಎಲ್ಲ ವೃಕ್ಷವು ಸಂಗದಿಂ ಚಂದನಾಗುದು ಗಾದೆಯ ಮಾತೆ ೨

ಕೋಟಿಗೆಂದೇ ಮಾತು ಕೇಳು ನಾಡ ಸಾಧನ್ಯಾಕ ।
ಸೂಟಿ ಹೇಳಿದ ಶ್ರೀ ಗುರು ಮಹಿಪತಿ
ಪುನರಪಿ ನೀ ಬರಬೇಕ ೩

## ೫೯೧

ಕೇಳೆಲೋ ಮಾನವ ಮೂಢಾ । ಕೇಳದೆ ನೀ ಕೆಡಬ್ಯಾಡಾ ।
ಶೀಲವರಿತುಕೋ ದೃಢಾ । ಹೇಳುವೆ ನಿಜ ಹಿತ ನೋಡಾ ಪ

ಹಾದ್ಯರಿಯದೆ ಪ್ರಚಂಡಾ ಓದಿಕೆ ಯಾಕ ಉದಂಡಾ ।
ಸಾಧಿಸೋ ಸಾಧನ ಕಾಂಡದ ಬೋಧಿಪ ಮಾರ್ತಾಂಡ ।

ಸಾಧಾರ ಕಂಡಾ ಗಳೆರಗು ಕಂಡಾ ।
ವಾದ ವಿತ್ತಂಡ ಬಿಡು ಪಾಷಂಡಾ ೧

ಹರಿಗುಣ ಕೊಂಡಾಡು ನೀ ಅಖಂಡಾ ಕೇಳು ಕೇಳು ಪ್ರಾಣಿ ।
ಕರಣ ತ್ರಯಂಗಳ ಬೆರಿಸಿ ಮೊರೆಹೋಗಾಭಾವನೆ ಬಲಿಸಿ ।
ಗುರುವಿಗೆ ಭಾರೊಪ್ಪಿಸಿ ಇರು ಸಂಶಯವಾ ತ್ಯಜಿಸಿ ।
ನೆರೆ ಜೌಭಾಗಿಸಿ ತನ ಬಿಡು ಹೇಸಿ ಕುಜನ ದುರಾಶೀ
ನದಿಯೊಳು ಸೋಸಿ ೨

ಗರುವ ಮುರಿದು ನಿರ್ದ್ವಂದಾ ಚರಿಸಿ ಹಿರಿಯರ ವೃಂದಾ ।
ಪರಿಯಲಿ ನಡಿನೀ ನೆಂದಾ ಗುರುವರ ಮಹಿಪತಿ ಕಂದಾ ।
ವಿವೇಕದಿಂದಾ ನಿಷ್ಠೆಯ ವಂದಾ ಹಿಡಿದಾನಂದಾ
ಪಡದರ ಬಂದಾ ।
ಜನ್ಮಕ ಛಂದಾ ನೋಡಿದರಿಂದಾ ಕೇಳು ಪ್ರಾಣಿ ೩

## ೫೯೨

ಗುರುವಚನದಲಿ ನಂಬನು
ನರಭಾವ ಅವರೊಳು ಕಾಂಬನು
ಕರಣ ತ್ರಯದಲಿ ಶುಂಭನು
ಗುರು ಭಕ್ತ ನೆನಿಸದರೇನು ಮಾ ೧

ಸರ್ವರೊಳು ಹರಿ ನೋಡದೇ
ಗರ್ವದ ಗುಣಗಳೀಸಾಡದೆ ನಿಜ ।
ದರ್ವಿನೊಳು ಮನ ಕೂಡದೇ ।
ಭಾಗವತರೆನಿಸಿದರೇನು ಮಾ ೨

ವಾಸನಿಯ ಬಲ ಕಡಿಯಾ ದೇವೆ ।
ಆಸೆಯಲಿ ಮನ ಜಡಿಯದೆ ನಿಜ ।
ದ್ಯಾಸದಂಡವ ಪಿಡಿಯದೆ ಸ ।
ನ್ಯಾಸಿಯೆನಿಸಿದರೇನು ಮಾ ೩

ನುಡಿಯ ಬೀರುತ ಸಂತರಾಜನ ।
ರೊಡನೆ ಹಾಕುತ ಸಿಂತರಾ ತಮ್ಮ ।
ನಡತಿ ನೋಡಲು ಭ್ರಾಂತರಾ ತಾ ।
ಸಂತ ನೆನಿಸಿದರೇನು ಮಾ ೪

ತಂದೆ ಮಹಿಪತಿ ಪಾದವಾ ಬೆರೆ ।
ಹೊಂದಿ ಕೇಳಿ ಸಂಬೋಧವಾ ಭವ ।
ಬಂಧ ಮಾಡದೇ ವಾತಾ ।
ಬಂದ ಜನಮಕಿದೇನು ಮಾ ೫

## ೫೯೩

ಗುರುವಿಗೆರಗೀ ತರಣೋಪಾಯವನರಿಯಲಿಲ್ಲಾ ಮನವೇ ।
ಮರುಳನೋ ತರಳನೋ ಬಲು ದುರುಳನು ನಾನರಿಯೇ ಪ

ಶ್ರೀನಾಥನಂಘ್ರಿ ಕಮಲಾ ಧ್ಯಾನವಿಲ್ಲ ಮನವೇ ।
ಮಾನವನಘ ದಾನವನೋ ನೀದನವೇನೋ ನಾನರಿಯೇ ೧

ರತಿಯ ಬಿಟ್ಟು ವಿಷಯದಲ್ಲಿ ಗತಿಯಾ ಜರದೀ ಮನವೇ ।
ಹಿತವೇನೋ ಮಿತವೇನೋ ಉನ್ಮತವೇನೋ ನಾನರಿಯೇ ೨

ಪೊಡವಿಯೊಳು ನರದೇಹವ ವಿಡಿದು ಬಂದೆ ಮನವೇ ।
ನಡಿದೇನೋ ನುಡಿದೇನೋ ಸುಖಪಡಿದೇನೋ ನಾನರಿಯೆ ೩

ಭಕ್ತಿ ಜ್ಞಾನಾ ಬಲಿವಾ ಸುವಿರಕ್ತಿ ಇಲ್ಲಾ ಮನವೇ ।
ಸಕ್ತನೋ ಯುಕ್ತನೋ ಆಯುಕ್ತನೋ ನಾನರಿಯೆ ೪

ಗುರು ಮಹಿಪತಿ ಪ್ರಭು ಶರಣರ ಕಾಯ್ದಾ ಮನವೇ ।
ನರವರನೋ ಸುರವರನೋ ಕಲ್ಪತರು ವರನೋ ನಾನರಿಯೆ ೫

## ೫೯೪

ಛೀ ಛೀ ಛೀ ಛೀ ಪ

ಬಿಟ್ಟು ಕೊಡೋ ನೀ ಸಂಸಾರ ಭ್ರಾಂತಿ ।
ಎಷ್ಟು ಸೋಸುವಿ ದುಃಖದ ಪಂಥಿ ।
ಅಷ್ಟು ಪಾಶದೀ ಬಿಗಿದಿಹ ಗ್ರಂಥಿ ।
ಕಷ್ಟ ಪಟ್ಟಿನ್ನು ಮಾಡುವಿ ಚಿಂತಿ ೧

ಮನದಂತಾಗೆ ಸತಿ ಸುತರೆಲ್ಲಾ ।
ಘನ್ನಸ್ನೇಹವ ಮಾಡುವರಲ್ಲಾ ।
ಧನ ಯೌವನ ಕೊರತ್ಯಾಗಿ ಸೊಲ್ಲಾ ।
ತೃಣ ಸಮಮಾಡಿ ಬಗೆವರು ಖುಳ್ಳಾ ೨

ಹಳೆದಾಯಿತು ತಾಳಿದ ಕಂಥೀ ।
ಬಲವಿಂದ್ರಿಯ–ವಾದವು ಶಾಂತಿ ।
ಬಲು ನೆರೆಯಿತು ರೋಗದ ಸಂತಿ ।
ಕೆಳಗಾಯಿತು ಪೌರುಷ ಖಂತಿ ೩

ಹಿರಿಕಿರಿಯರು ಸರಿಕರು ನಿನ್ನಾ ।
ಸರಿದ್ಹೋಗುದು ಕಾಣಲಿಲ್ಲಾ ಕಣ್ಣಾ ।
ಅರಿತು ವಿವೇಕವ ಪಡಿಯದೆ ಘನ್ನಾ ।
ಮರೆದಾಗುರೆ ನೀ ಮಸಿಮಣ್ಣಾ ೪

ಒಂದಾಗಲು ಮತ್ತೊಂದಾಶೆ ।
ಸಂಧಿಸುವದು ವಾಸನೆ ಸೂಶಿ ।
ತಂದೆ ಮಹಿಪತಿ ನಂದನು ಹೇಸಿ ।
ಇಂದು ಸಾರಿದಾ ಹರಿನಾಮ ಸ್ಮರಿಸಿ ೫

## ೫೯

ಛೀ ಯಾತರ ಜನ್ಮಾ ।
ನಾಯಿಗಿಂದತ್ತಾಧಮ ಪ

ಛೀ ಯಾತರ ಜನ್ಮಾ
ನಾಯಿ ಹಿಂದತ್ತಾಧಮ
ಬಾಯಿ ಬಡಕನಾಗಿ
ಮಯ್ಯ ಮರೆವರೇ ನಿಮ್ಮಾ ಅ.ಪ

ಸಾಧುರಾನುಸರಿಸಿ ।
ಬೋಧನಾಮೃತ ಸೇವಿಸಿ ।
ಹಾದಿವಿಡಿದು ಗತಿ ಸಾಧಿಸಿ ।
ದಾದೆಲೋ ಘಾಸಿ ೧

ಬುದ್ಧಿ ತನಗ ಇಲ್ಲಾ ।
ತಿದ್ದಿದರ ಕೇಳಲಿಲ್ಲಾ ।
ಇದ್ದೆರಡಾದಿನದೊಳು ।
ಸದ್ಯ ಸೌಖ್ಯ ಕಳೆದೆಲ್ಲಾ । ೨

ಕಲ್ಲು ಕಟೆಯ ಬಹುದು ।
ಬಿಲ್ಲು ಮಣಿಸಬಹುದು ।
ನಿಲ್ಲದೇ ವನಕಿ ತುಂಡಾ ।
ಸಲ್ಲದಂತೆ ನೀನಾಗುದು ೩

ಮರಹುಟ್ಟಿ ಮರ ಬಿದ್ದಾ ।
ತೆರನಾದೋ ಅಪ್ರಬುದ್ಧಾ ।
ತಿರುಗಿ ನೋಡಿನ್ನಾರೆ ।
ಜ್ಜರಿತು ನೀ ಮದದಿಂದ ೪

ಗುರು ಮಹೀಪತಿಜನಾ
ಧರಿಸಿರೋ ಸದ್ವಚನಾ
ಸರಿಕರ ಕಂಡು ಹ್ಯಾವಾ
ವರಿಸದೆ ಇಹುದೇನಾ ೫

## ೫೯೬

ಛೀ ಯಾತರ ಬುದ್ಧಿ ।
ಸೊಕ್ಕಿನ ಮಾತಿಲಿ ಬಲು ನೊಂದಿ ಪ

ಗುರುಹಿರಯರ ಅನುಸರಿಸದೇ ।
ಹರಿಚರಣವ ಕೊಂಡಾಡದೇ ।
ಬರಡಾ ನಾಲಿಗೆ ಮಾಡಿದಿ ಬರಿದೇ ೧

ವಳ್ಗವ ಹೊಲ್ಲವರಿಯದೇ ।
ಯಳ್ಳಿನಿತು ನೀ ವಿಚಾರಿಸದೇ ।
ನಿಲ್ಲದೇ ಮಾಡುವಿ ಬಗಳುವದೇ ೨

ಕೆಂಡವ ಕಂಡು ನೆರೆ ।
ಮಂಡಿಯಾ ತುರಿಸುವರೆ ।
ತುಂಡತನ ಗುಣ ಬಿಡು ಇನ್ನಾರೆ ೩

ಪೊಡವಿ ದೇವತೆಯ ಕೋಣಾ ।
ಯಡಬಲ ನೋಡದಿರಲೇನು ।
ಕಡೆಯಲಿ ಕೆಡುವರು ಒಂದಿನಾ ೪

ಮಹಿಪತಿಸುತ ಪ್ರಭು ದಾಸರ ಕೈ ।
ಅಹುದೆನಿಸಿಕೊಂಬುದೆ ಸ್ವರ್ಗಯ್ಯ ।
ವಿಹಿತಲ್ಲೆಂಬುದೇ ನರ್ಕದಾಶ್ರಯಾ ೫

## ೫೯೭

ಜಗದೊಳಗ । ಸಾಧುರ ಮಹಿಮೆಯ ನೋಡಿ ।
ಸಾದರದಿಂದಲಿದೇ ಸಾಧನವೇ ಮಾಡಿ ಪ

ಸಾಧುರ ನೋಡಿ । ಬಾರದ ಬಯಸುವರಲ್ಲಾ ।
ತಾನಾಗಿ ಬಂದ । ದಾರಿಯ ತ್ಯಜಿಸಲಿಕ್ಕಿಲ್ಲಾ
ಬರುದೆ ಕಂಡಾ । ದುರಾಶೆ ಸೇರುವರಲ್ಲೆ ।
ದೊರಕಿದನಿತೆ ಲಾಭ । ಸಂತುಷ್ಟರಾಗಿಹರೆಲ್ಲಾ ೧

ಸಾಧುರ ನೋಡಿ । ಬ್ರಹ್ಮಭಾವನೆ ಸಮತಾಳಿ ।
ಸಕಳಿಲ್ಲಿ । ಹಮ್ಮಿನ ಮೊಳಿಕೆಯ ಕೇಳಿ ।
ಸಿದ್ಧಾಂತದಿಂದ ತಮ್ಮನು ಭವದಲಿ ಬಾಳಿ ।
ಮುಮ್ಮುಳಿ । ಬಿಡಿಸುವರೊಂದೊಂದೇ ನುಡಿಹೇಳಿ ೨

ಸಾಧುರ ನೋಡಿ । ಭಕ್ತಿಯ ಆಶ್ರಯ ಮಾಡೀ ।
ಬಂದವರಿಗೆ । ಮುಕ್ತಿಯ ಅನ್ನ ಸತ್ರ ನೀಡೀ ।
ಸದ್ಬೋಧದ । ಯುಕ್ತಿಯಾನಂದದೊಳಗಾಡೀ ।
ಉಕ್ತವಾದ ಗುರು ಮಹಿಪತಿಸ್ವಾಮಿ ಕೂಡೀ ೩

## ೫೯೮

ಜಗದೊಳಗಿದ್ದವ ಧೀರಾ ।
ಅವಗೆಲ್ಲಿಹುದು ಭವ ದೂರ ದೂರ ದೂರ ದೂರ ಪ

ಮೆರೆವ ಪ್ರಪಂಚ ಪರಮಾರ್ಥ ದೂರಾ ।
ಎರಡು ಸಮಲಿದ್ದವ ಧೀರ ಧೀರ ಧೀರ ಧೀರ ೧

ಸಕಲವೆಲ್ಲವು ಹರಿಯಚ್ಚರಾ ।
ಯುಕುತಿಮನ ಬಲಿದವ ಧೀರ ಧೀರ ಧೀರ ಧೀರ ೨

ಜರಿಯ ಸಂಸಾರವ ವಿರಕ್ತಿಯ ದೋರಾ ।
ನೀರು ಕಮಲದಂತೆ ಇರುವಾ ಧೀರ ಧೀರ ಧೀರ ಧೀರ ೩

ಗುರುಮಹಿಪತಿ ಸ್ವಾಮಿ ಚರಣ ತತ್ಪರಾ ।
ಗಿರುವ ಸಾವಧಾನದಿಂದ ಧೀರ ಧೀರ ಧೀರ ಧೀರ ೪

## ೫೯೯

ತಿಳಿದವನೇ ಪೂರ್ಣಾ ।
ತಿಳಿವಿಕೆಯೊಳು ತನ್ನಯ ಖೂನಾ ಪ

ತಿಳಿವಿಕೆ ತಿಳಿವದು ಯರಡಿಲ್ಲೆಂದು ।
ತಿಳಿದೇ ನರ ಬಾಹಂಭ್ರಮ ಜರಿದು ೧

ವೇದಾಂತ ಸಾರದ ವಾಜ್ಯನು-ಭವನು ।
ಸಾಧು ಜನರ ದಯದಲಿ ಪಡೆದನು ೨

ಜಲಧಿಯೊಳಗ ಲಹರಿಗಳೇಳ್ವಂತೆ ।
ಸಲೆ ಆತ್ಮನಿಂದಲಿ ಜಗದುದ್ಭವಂತೆ ೩

ಪೂರ್ವಾರ್ಧದ ಬಿಸಿಲಿನ ನೆರಳೆಂದು ।
ದೋರ್ವ ಸಂಸಾರವು ಸ್ಥಿರವಲ್ಲೆಂದು ೪

ಗುರುಮಹಿಪತಿ ಚರಣಕ ತಲೆವಾಗಿ ।
ಬೆರೆದು ಸತ್ವದೊಳಗ ರಜತಮ ನೀಗಿ ೫

## ೬೦೦

ತಿಳಿವಿಕೆ ನೋಡಣ್ಣಾ ಪ

ಉಬ್ಬುಸಗೊಳುತಲಿ ಹುಡುಕುತ ತಂದು ।
ಒಬ್ಬರ ಪದ ಪದ್ಯಗಳನೇ ಹಳಿದು ।
ಉಬ್ಬುಬ್ಬಿ, ಹೇಳುವ ತನ್ನದೆಂದು ೧

ಹಂಬಲಿಸದೆ ಮೃದು ತಂಪಿನ ಯಲಿಯಾ ।
ಬೆಂಬಿಸ ದಾರಿಸಿ ಮುಳ್ಳಿನ ಕೊನೆಯಾ ।
ತಿಂಬುವ ಒಂಟೆಯ ಮತಿಪರಿಯಾ ೨

ಪರಿಪರಿ ಶೃಂಗಾರದ ಕಲೆಯಂಗಳು ।
ನೆರೆ ವೇಷಿಯ ಪರಿ ಅರೆಯದೆ ಇರಲು ।
ಕೊರತೇನು ಪತಿವ್ರತೆ ಗುಣಗಳು ೩

ಕಬ್ಬಿನ ಸಾರಸ ತಿಳಿಯದೇ ನೋಡಾ।
ನಿಬ್ಬಿರೆನುತಾ ಬಿಟ್ಟವ ಬಲು ಮೂಢಾ ।
ಹಬ್ಬುವಾ ಚಾತುರತನ ಕೂಡಾ ೪

ಬರೆ ಬೀರುತ ಮಾತುಗಳನೆ ಬಚ್ಚಾ ।
ಧರೆಯೊಳು ಹೆಮ್ಮಿಗೆ ಬಿದ್ದನು ಹುಚ್ಚಾ ।
ಗುರು ಮಹಿಪತಿ ಸುತ ಪ್ರಭು ಮೆಚ್ಚಾ ೫

## ೬೦೧

ತಿಳಿಯೋ ಮನವೇ ನಿಜ ಘನವಾ ।
ಕಳಿಯೋ ಹಮ್ಮಿನ ಅವಗುಣವಾ ಪ

ಸದ್ಗುರು ಶರಣವ ನೀ ಬ್ಯಾಗ ।
ಸದ್ಗುಣದಲಿಹುದು ಜಗದೊಳಗ ।
ತದ್ಗತ ಬೋಧವರೆದು ಈಗ ।
ಸದ್ಗತಿ ಕಾಣಿಸುವದು ನಿನಗ ೧

ಪಿಡಿಯದೆ ನಾನಾ ಬಯಕೆಯನು ।
ತಡೆಯದೆ ಬಿಡು ಕುಜನಾಶ್ರಯನು ।
ಇಡು ಗುರು ಪದ ಭಕುತಿಯನು ।
ಪಡೆ ದೃಷ್ಟಿಯ ಘನ ಸಮತೆಯನು ೨

ಬ್ಯಾರೆ ಬ್ಯಾರೆ ನಗದಾಕಾರಾ ।
ತೋರಿದರೇನದು ಬಂಗಾರಾ ।
ಈ ರೀತಿ ಮಾಯದ ವ್ಯವಹಾರಾ ।
ಈರೇಳು ಜಗ ಚಿನ್ಮಯ ಸಾರಾ ೩

ಗೋಡಿಯಿಂದಲಿ ಚಿತ್ರಗಳೆಲ್ಲಾ ।
ರೂಢಿಸಿ ದೋರಿತು ಜನರೆಲ್ಲಾ ।
ಆಡಲು ಯರಡಕ ಹೊರತಿಲ್ಲಾ ।
ನೋಡಲಾಯಿತು ತಾನೇಯಲ್ಲಾ ೪

ಹಾಲುಕ್ಕಿದ ಸೋರೆಯ ಪರಿಯಾ ।
ಜ್ಯಾಳಿಸಬ್ಯಾಡಾ ಯುವ ಬರಿಯಾ ।
ಕೇಳಿಕೋ ಮಹಿಪತಿ ಸುತ ಧೋರಿಯಾ ।
ಬಾಳು ಗಳೆದು ದುಸ್ತರಿಯಾ ೫

## ೬೦೨

ದಹಿಸಲು ಮುನ್ನಿನ ದೋಷವ ನೆಲ್ಲವ ನಡೆದನು
ವಾರಣಾಶಿಗೆ ಓಡಿ ।
ಮಹಸ್ಥಳ ಹುಶಿಯಾಡುತ ವಿಪ್ರರ ವಂಚಿಸಿ
ಅಲ್ಲಿಯ ಯಾತ್ರೆಯ ಮಾಡಿ ।
ವಹಿಲದಿ ವಂದಾರಾದರ ಆಡಿದರುಂಬುದಿಲ್ಲೆಂಬುರು
ಹೆಮ್ಮಿಯ ಕೂಡಿ ।
ಮಹಿಪತಿ ನಂದನ ಸಾರಿದ ಸ್ವಹಿತಕ ವ್ಯರ್ಥ ಜನಕ
ಸಾಧನ ನೋಡಿ ೧

## ೬೦೩

ದಾರಿಯ ವಿಡಿರಣ್ಣ । ಸ್ವಹಿತದ ದಾರಿಯ ಹಿಡಿರಣ್ಣಾ ಪ

ದಾರಿಯ ವಿಡಿನಿಜ ಸಾರಿಹ ಶೃತಿಗಳ ।
ಸಾರವರಿತು ಹರಿ ಚಾರು ಭಕುತಿಯಾ ಅ.ಪ

ಬಲ್ಲವರಿಗೆ ಬೆಸಗೊಳ್ಳುತ ಮನಸಿನ ।
ಖುಳ್ಳತನದ ಗುಣವೆಲ್ಲವು ಹೋಗಿ ।
ಬಲ್ಲವರನು ಕಂಡು ಮೆಲ್ಲಡಿಗಳ ವಿಡಿ ।
ದುಳ್ಳ ಸಿದ್ಧಾಂತದ ಸೊಲ್ಲವ ಕೇಳಿ ।
ಉಲ್ಹಾಸದಿಂದಲಿ ಮೆಲ್ಲನ ಭ್ಯಾಸವ ।
ಮೆಲ್ಲನೆ ಮಾಡುತ ಸುಲ್ಲಭ ತೆರದಾ ೧

ಕಂಡ ಪಥಕ ಹರಿದಂಡಲೆಯದೆನೆರೆ ।
ತಂಡಿಸುತಿಹ ಪಾಷಾಂಡ ಹೋಗಿ ।
ಚಂಡ ಸುಜ್ಞಾನದ ಲುಂಡನು ಭವದೃಢ ।
ಗಂಡು ಸದ್ಬೋಧದಿ ಪಂಡಿತನಾಗಿ ।
ಹಿಂಡ ಭಾಗವತರ ಮಂಡಲದೊಳು ಕೂಡಿ ।
ಪುಂಡರೀಕಾಕ್ಷನ ಕೊಂಡಾಡುತ ನಿಜ ೨

ಹಿಂದಿನ ಸುಕೃತಗಳಿಂದ ನೃದೇಹದಿ ।
ಬಂದೆನು ನಾನಿನ್ನು ಮುಂದಣ ಗತಿಯಾ ।
ಹೊಂದುವೆ ನಾವದುಯಂದು ವಿಚಾರವಾ ।
ತಂದು ಸದ್ಭಾವಲಿಂದೇ ನಿಷ್ಠೆಯಲಿ
ತಂದೆ ಮಹಿಪತಿ ಪ್ರಭುಪದ
ದ್ವಂದ್ವ ಬಲದಿ ಭವ ಬಂಧನ ಹರಿವಾ ೩

## ೬೦೪

ದಾವನು ನಿತ್ಯನಿರಂಜನ ಜನ್ಮನು ।
ದೇವಕಿ ಗರ್ಭದಿ ಮೂಡೀ ।
ಅವನ ಮನಿ ಪಾಲ್ಗಡಲು ಯಶೋದೆಯ
ಮೊಲೆವಾಲಿಗೆ ಬಾಯಿದೆರೆಯುವವ ನೋಡಿ ।
ಕೇವಲ ಜ್ಞಾನಮಯನು ಸಕಲೇಂದ್ರಿಯ
ಖೂನಿಸಿ ತೋರುವ ಸನ್ನೆಯ ಮಾಡೀ ।
ಶ್ರೀ ವತ್ಸಾಂಕನು ಗುರುಮಹಿಪತಿ ಪ್ರಭು
ಬಾಲಕನಾಗ್ಯಾಡುವ ನಲಿದಾಡೀ ೧

## ೬೦೫

ದಾಸನಾಗುವೆನು । ಹರಿಯೇ ನಿಮ್ಮಾ ಪ

ದಂಡಿಗೆವಿಡಿದು ಊರ್ಧ್ವಪೌಂಡ್ರ ತುಳಸೀ ಮಾಲೆಯಿಂದಾ ।
ಪುಂಡಲೀಕವರದ ಶ್ರೀ ಪಾಂಡುರಂಗ ವಿಠಲೆಂಬಾ ೧

ಲಜ್ಜೆಯನಳಿದು । ನೃತ್ಯ ಹೆಜ್ಜೆಗೊಮ್ಮೆ ತೋರಿಸುತ ।
ಗರ್ಜಿಸುತ ಹರಿನಾಮ ಸಜ್ಜನರ ವೆಲಿಸುವಾ ೨

ಹಲವು ಪುಷ್ಪ ತುಳಸಿಯಿಂದಾ ।
ನಳಿನಾಂಘ್ರಿಯಾ ಪೂಜೆಮಾಡಿ ।
ನಲಿದು । ನವವಿಧ ಭಕ್ತಿಕಲೆಗಳಾ ತೋರಿಸುವಾ ೩

ಎನ್ನ । ತನುಮನಧನವನ್ನು ನಿನಗರ್ಪಿಸುತಾ ।
ಅನ್ಯದಾರ । ಭಜಿಸದೆ ನಿನ್ನವೆನೆಂದೆನಿಸುವಾ ೪

ತಂದೆ ಮಹಿಪತಿ ನಿಜ ನಂದನ । ಸಾರಥಿ ನಿನ್ನ ।
ಹೊಂದಿದ ಭಕ್ತರ । ಪುಣ್ಯ ಮಂದಿರದಿ ಜನಿಸುವಾ ೫

## ೬೦೬

ದಾಸರ ಸಂಗವನಾ ।
ದಾಸರ ಸಂಗವ ಬೇಡುವೆ ನಾ ।
ಹರಿದಾಸರ ಸಂಗವನಾ ಪ

ದಾಸರ ಸಂಗವ ಬೇಡುವೆ ನಾನಿನ್ನಾ ।
ಧ್ಯಾಸದಿ ಅನುದಿನ ಲೇಶನಿಸೀ
ವಾಸುದೇವಚ್ಚುತ ಹರಿಯಂದು ನೆನೆಯುತ ।
ಹೇಸಿ ಜನರ ಮನಿ ಆಶೆಯ ಜರಿದಾ ೧

ತಾಳ ಮೃದಂಗ ವೀಣಾದಿಯ ಸುಜನರ ।
ಮೇಳದಿ ಶ್ರೀಹರಿ ಚರಿತವನು ।
ಹೇಳುತ ಕೇಳುತ ಆನಂದ ಬಾಷ್ಪದಿ ।
ಆಳಿಯ ಹರುಷದಿ ತನುವನೆ ಮರೆವಾ ೨

ವಂದ್ಯರು ಎಂದರಾನಂದವ ಬಡುತಲಿ ।
ಇಂದಿರೇಶನ ವಲುಮೆಯಂತಿಹದೋ ।
ಎಂದು ಮನದೊಳು ಸಂದೇಹ ಬಗಿಯದೆ ।
ವಂದಿಸಿ ಮುಂದಕ ಬಂದಪ್ಪಿಕೊಳುವಾ ೩

ಸರ್ವರೊಳಗ ಹರಿ ಇರ್ವನು ಯನುತಲಿ ।
ಉರ್ವಿಲಿ ನಿಂದೆಯ ಜರಿದಿಹನು ।
ಗರ್ವವ ಹಿಡಿಯದೆ ಬಾಗಿದ ಭಕುತಿಯ ।
ಸುರ್ವಸಾರಾಯದ ಪರ್ವವನುಂಬಾ ೪

ನಡಿಲೇಸು ನುಡಿಲೇಸು ಹಿಡಿದ ನೆರೆಲೇಸು ।
ವಡಗೂಡಿದವರಿಂಗೆ ಭವ ನಿಲ್ಲದು ।
ಪೊಡವಿಲಿ ಮಹಿಪತಿ ನಂದನ ಸಾರಥಿ ।
ದೃಢದಲಿ ಕಂಡು ನನಗಿದೆ ಲೇಸು ೫

## ೬೦೭

ದೇವರಲ್ಲೇ ಸಜ್ಜನವರವನಿ । ಪ

ಸುಖವಾಗಲಿ ಬಹು ದುಃಖವಾಗಲಿ ನೆರೆ
ಅಕುಲ ತನ್ನಂತಖಿಳದಿ ನೋಡುತಾ ।
ಸಕಲರ ಹಿತದಲಿ ಪ್ರಕಟದಿ ಬಾಳುತಾ ।
ಮಕ ಮಾವುಗಳ ವಿಕಳರಿಯರು ೧

ಶಾಂತಿ ಶಮೆದಮೆದಾಂತಿ ತಿತಕ್ಷಾ ।
ಅಂತರ್ಬಹಿಯವಂತರು ಭಕ್ತಿಯ ।
ಪಂಥದಿ ನಡೆಯುತ ನಂತನ ಮೂರುತಿ ।
ಚಿಂತಿಸಿ ಮನ ವಿಶ್ರಾಂತಿಯಲಿಹರು ೨

ಅಣುಪರಿ ಸದ್ಗುಣ ಮನುಜನ ಕಂಡರ ।
ವನಪರ್ವತ ಸಮವೆನೆ ಕೊಂಡಾಡುವ ।
ತನುಮನ ವಚನದಿ ಘನ ಪುಣ್ಯಾಮೃತ ।
ಮನಿಗುರು ಮಹಿಪತಿ ತನು ಭವಗಂದಾ ೩

## ೬೦೮

ದೇವರಿಂದಲಿ ಭಕ್ತಧಿಕನು ।
ಭಾವ ಭಕುತಿಯಲಿ ಬಲ್ಲಿದನು ಪ

ಅವನ ಉದರದಲಿ ಜಗವಿಹುದು ।
ಅವನ ತನ್ನೆದೆಯಲ್ಲಿ ನಿಲಿಸಿಹನು ೧

ದಾವನಿಂದಲಿ ಜಗಹುಟ್ಟುತಲಿಹುದು ।
ಅವನ ಜನುಮಕಿವ ತಾರಿಸಿದನು ೨




ಕಾಳಗದಲಿ ನಿಸ್ಸೀಮನ ದಾವನು ।
ಸೋಲಿಸಿದವನೆನು ನದಿಸುತನು ೩

ಸಾಗರ ಜಲ ಘನ ತುಂಬಿಕೊಂಡಿಹುದು
ಮೇಘ ಮುಖದಿ ಬೆಳೆಯಾಗುವದು ೪

ಬಾಳಿಗಿಡವು ಸ್ವಾನಂದದಲಿಹುದು ।
ಬಾಳೆಹಣ್ಣವು ಜನ ನಲಿಸುವುದು ೫

ಸಂಗರಹಿತ ಗುರು ಮಹಿಪತಿ ಸ್ವಾಮಿಯ ।
ಹಂಗಿಗನನು ತನ್ನ ಮಾಡಿದನು ೬

## ೬೦೯

ದೈತ್ಯರಲ್ಲೆ ದುರ್ಜನ ಸೇವೆ ಪ

ಪರರ ಲಾಭವನು ಧರಿಯೊಳು ನೋಡುತ ।
ಧರಿಸಲಾರ ಧಿಕ್ಕರಿಸುತ ನುಡಿವನು ।
ಪರರ ಹಾನಿಯಲಿ ಮರುಗದೆ ಮನದೊಳು ।
ಹರುಷ ಬಡವುತ ಚರಿಸು–ನ್ಯೆಯ್ಯಾ ೧

ಖಳ್ಳೆದೆಯೊಳು ಮನದಲ್ಲಿ ಕಪಟವು ।
ಸೊಲ್ಲಿತೆ ನೋಡಲು ಬೆಲ್ಲನೆ ಬೀರುವಾ ।
ಒಳ್ಳಿತು ಗುಣಗಳ ಯಳ್ಳಿಲಿ ನಿತ್ಯೆಣಿಸದೆ ।
ಕ್ಷುಲ್ಲತನದಿ ಕುಂದಲ್ಲಿಡುವ–ಕೈಯ್ಯಾ ೨

ಎನ್ನ ಕುಲವೆಕುಲ ಯನ್ನ ಸತಿಯೆ ಸತಿ ।
ಎನ್ನ ಮಗನೆ ಮಗ ಯನ್ನ ಗುಣವೇಗುಣ ।
ಎನ್ನ ವಿದ್ಯೆಯೆ ಘನ ಧನ್ಯನಾನೆನುತಲಿ ।
ತನ್ನನೆ ಹೊಗಳುತ ಅನ್ಯಕ್ಷಳಿವರೆ ೩

ಆವದು ಅರಿಯದ ಭಾವಿಕ ಜನರನು ।
ತಾವೀಗ ಕಂಡರೆ ಆವನನುಗ್ರಹ ।
ಆವ ಮಂತ್ರ ನಿನಗಾವ ನ್ಯಾಸವೇ ।
ದಾವಾಗ ಛಲಣಿಯ ಭಾವಿಪರವರೇ ೪

ತಂದೆ ಮಹಿಪತಿ ನಂದನ ಪ್ರಭುವಿನಾ ।
ಒಂದರಗಳಿಗೆಯ ಛಂದದಿ ಸ್ಮರಿಸದೆ ।
ನಿಂದೆಯ ಮನೆಯೊಳು ಸಂದಿಸಿ ಅನುದಿನಾ ।
ನಂದದಿಗಳೆವಾ ಮಂದ ಮತಿಯರೇ ೫

## ೬೧೧

ಧನ್ಯ ಧನ್ಯಾ । ಜಗದೊಳವನೇ । ಧನ್ಯ ಧನ್ಯಾ ।
ಧನ್ಯ ಧನ್ಯ ಅವ ತನ್ನೊಳು ಸ್ವಹಿತದ ।
ಕಣ್ಣದೆರೆದು ಗುರುವಿನ್ನರಿತಿಹ ನಿಜ ।
ಸಣ್ಣ ದೊಡ್ಡದರೊಳು ಘನ್ನವ ನೋಡುತಾ ।
ಮನ್ನಿಸಿ ಶಾಂತಿಯಲಿನ್ನಿಳಿದವನೇ ೧

ವಾದಗಳಳಿದು ಕ್ರೋಧವ ಕಳೆದು ।
ಸಾಧುರ ಕಾಣುತ ಪಾದಕ ಯರಗುತ ।
ಮೋದವ ಕುಡುವ ಬೋಧವ ಕೇಳುವ ।
ಸಾಧನ ನಾಲ್ಕರ ಹಾಧ್ಧಿಡಿದವನೇ ೨

ಎಲ್ಲರಿಗೇ ಕಿರಿದೊಳ್ಳಿತೆನಿಸಿ ।
ಬಲ್ಲತನದ ಗರ್ವೆಲ್ಲವ ತ್ಯಜಿಸಿ ।
ಸೊಲ್ಲು ಸೊಲ್ಲಿಗೆ ಸಿರಿ ಫಲ್ಲನಾಭನ ಪದ ।
ದಲ್ಲೆವೆ ಮನರತಿ ನಿಲ್ಲಿಸಿದವನೇ ೩

ಹಂಬಡೆಡಂಬಕ ನೊಬ್ಬರಕೂಡದೇ ।
ಒಬ್ಬರು ಹೊಗಳಿದರುಬ್ಬದೆ ಮನದಲಿ ।

ನಿಬ್ಬರ ಮಾತಿಗೆ ಉಬ್ಬಸಗೊಳ್ಳದೇ ।
ಕೊಬ್ಬಿದ ಹಮ್ಮುವ ಲೆಬ್ಬಿಸಿದವನೇ ೪

ಒಂದೇ ನಿಷ್ಠಿಯು ಒಂದೇ ಮಾರ್ಗದಿ ।
ದಂದುಗ ವೃತ್ತಿಗಳೆಂದಿಗೆ ಹೊಂದದೆ ।
ತಂದೆ ಮಹಿಪತಿ ನಂದನ ಸಾರಿದ ।
ಬಂದದ ಸಾರ್ಥಕದಿಂದಿದ್ದವನೇ ೫

## ೬೧೧

ಧರಿಯೊಳು ಸಂತ ಚರಿಯ ಅಗಾಧಾ ಪ

ನಾನಾ ಕಲ್ಪನೆಗಳೆದು ವಿಚಾರದಿ ।
ತಾನಾದನು ನಿಜಬೋಧಾ ೧

ಭಗವಧ್ಯಾನದಿ ಜನಸ್ತುತಿ ನಿಂದೆಗೆ ।
ಬಗಿಯನು ಹರುಷವಿಷಾದಾ ೨

ಗುರುಮಹಿಪತಿ ಪ್ರಭುನಾಮಕೀರ್ತನೆಯಲಿ ।
ಗರೆವರು ಪರಮಾಹ್ಲಾದಾ ೩

## ೬೧೨

ಧೀಮಂತರ ದಯಪಡೆದು ಮಾಧವನ ಪದ ವಿಡಿದು ।
ಪ್ರೇಮದಿ ಭಜಿಸೆನ್ನ ಮನವೇ । ಪ

ಕಾರ್ಮುಗಿಲದುಗ್ಧರಾಶಿಯನು ಶೃತಿಗೆ ಬೀಳಲ್ಪ ।
ಯೋರ್ಮನದಿ ಸಂತೋಷಿಪಂತೇ
ನಿರ್ಮಳಾಂಗಣ ಕಥೆಯ ಘೋಷವೇನು ಕೇಳಿ ಅತಿ ।
ಪೆರ್ಮೆಯಿಂದಲೆ ನಲಿದು ಬಾಳು ೧

ನೋಡಲಾಕ್ಷಣ ತನ್ನ ಮಾತೆಯನು ಮುದದಲಿಂ ।
ಲೋಡಿ ಬಪ್ಪುವ ಶಿಶುವಂತೆ ।
ರೂಢಿಯೊಳು ಸಜ್ಜನರ ಕಂಡಾಕ್ಷಣಕ ತನುವ ।
ನೀಡಿ ಸಾಷ್ಟಾಂಗದಿಂದೆರಗು ೨

ಮಿಗಿಲಾಸೆಯನು ತ್ಯಜಿಸಿ ದಾಗಸದ–ಲಿಂಬರ್ವ ।
ನಿಗಳುಂಬ ಚಾತಕನ ತೆರದಿ ।
ಮುಗಳೆ ದಯದಿಂದ ಸಜ್ಜನ ಮುಖದಿ ಬಪ್ಪಬೋ ।
ಧೆಗಳ್ಪೊತನು–ವಾನುಗ್ರಹಿಸು ಧರಿಸು ೩

ಕತ್ತಲೆಯ ಮನೆಗೆ ಮಣಿ ದೀಪವಾದಂತೆ ಸ ।
ರ್ವೋತ್ತಮನ ಪಾದ ಕಮಲಗಳಾ ।
ಅತ್ಯಧಿಕ ಹರುಷದಿಂ ಹೃದಯದೊಳ್ ಧರಿಸಲ್ಕೆ ।
ಮೊತ್ತದ ಜ್ಞಾನ ತೋಳಗುವದು ೪

ಸಿರಿಯು ಬಂದಾಗ ಮದಕರಿಯಂತೆ ಗರ ಹೊಡೆದು ।
ಧರಿಯೊಳಗ ಗರ್ವಿಸಲಿ ಬ್ಯಾಡಾ ।
ಸಿರಿಯು ತೊಲಗಲು ಕುನ್ನಿಯಂತನ್ನ ದಾಸಿಂಗೆ ।
ಪರರು ಮನವಡಿದು ಬಳಲದಿರು ೫

ಕಮಲಜನ ಪದಕ ಕತ್ತದೀವರ ಅನುಮತದ ।
ವಿಮಲಮಾರ್ಗ ಹೊಲಬ ನರಿದು ।
ಅಮಲೂರ್ಧ್ವ ಪೌಂಡ್ರ ಹರಿ ಲಾಂಛನವು ತುಳಸಿ ಸರ
ಕ್ರಮದಿಂದ ಧರಿಸಿ ಸುಖಿಯಾಗು ೬

ಹರಿಪರದೈವವೆಂದು ಅರಿತು ಭಾವದಿ ನಿಂದು ।
ಹರಿ ಕೋಟಿ ನಿಭಕ ಮಿಗಿಲೆನಿಸಿ ।
ಮೆರೆವ ಮಹಿಪತಿ ನಂದನೊಡಿಯ ನಾಮಂಗಳನು ।
ಸ್ಮರಿಸಿ ಇರಳ್ಹಗಳ ಕೊಂಡಾಡು ೭

## ೬೧೩

ನರಜನ್ಮ ವ್ಯರ್ಥವಲ್ಲವೇ । ಈ ಮೂಢರ ।
ನರಜನ್ಮ ವ್ಯರ್ಥವಲ್ಲವೇ ಪ

ಗುರುಗಳ ಶರಣ್ಹೊಕ್ಕು ದಯ ಪಡಿಲಿಲ್ಲಾ ।
ತರಣೋಪಾಯದ ನಿಜ ತಿಳಿದವನಲ್ಲಾ ೧

ಘಟ್ಟಿಸಿ ಒಬ್ಬರ ಮನಿಯ ಮುಣಗಿಸಿ ।
ಹೊಟ್ಟೆಯ ಬಿಟ್ಟನು ಅನ್ಯಾಯ ಘಳಿಸಿ ೨

ಉತ್ತಮರಲ್ಲಿ ಅರಕ್ಷಣವಕ್ಕುಳ್ಳಿರನು ।
ಲೆತ್ತ ಪಗಡಿಯಾಡಿ ಹೊತ್ತು ಗಳೆವನು ೩

ವಾಸುದೇವನ ಸೇವೆಗಾಲಸ್ಯ ಹಿಡಿದಾ ।
ಕಾಸಿನ ಆಶೆಗೆ ಎತ್ತಾಗಿ ದುಡಿವಾ ೪

ಮಹಿಪತಿ ನಂದನ ಪ್ರಭುವಿನ ಮರತಾ ।
ಸ್ವಹಿತದ ಹಾದಿಗೆ ಅವನು ಹೊರತಾ ೫

## ೬೧೪

ನಿರ್ತದೊಡ್ಡದೈಯ್ಯಾ ।
ಅರ್ತವರಿಗೆಲ್ಲಿದೆ ಭಯವು ಪ

ಗುರುವಿನಂಘ್ರಿಯ ಕಂಡು ।
ಗುರುದಯ ಪಡಕೊಂಡು ।
ಚರಿಸುವರಾನಂದ ನುಂಡು ೧

ಘನದೆಚ್ಚರುಳ್ಳವಗ ।
ಬಿನಗುದೈವದ ಸಂಗ ।
ಆನಿಯೇರಿ ಕುನ್ನಿಯ ಹಂಗ ೨

ಮೊಮ್ಮಕ್ಕಳ ಕಂಡಿರೆ ।
ಗುಮ್ಮನೆಂದರಂಜುವರೆ ।
ತಮ್ಮನುಭವ ಬಿಡುವರೆ ೩

ಮುಂದಾಗುವ–ಹಿತೊಂದು ।
ಇಂದಿವೆ ಬಾರದ್ಯಾಕೆಂದು ।
ಮುಂದಗಿಡನು ಎಂದೆಂದು ೪

ಮದಿರೆಕೊಂಡವನಂತೆ ।
ಮದವೇರಿಹ ನಗುತ ।
ಮಧುಹರನ ಕೊಂಡಾಡುತ ೫

ತಂದೆ ಮಹಿಪತಿದಯಾ ।
ನಂದ ಕವಚದಿ ಕಾಯಾ ।
ಛಂದ ಮಾಡಿದಾ ಉತ್ಸಾಯಾ ೬

## ೬೧೫

ನಿಧಾನವೆ ಕೇಳಿ ಸಜ್ಜನವೇ
ಇಂದು ಜಿನ ಶಕ್ತಿಯಾನಂದದಾರಾಧನ ಪ

ಒಂದು ಮನದಲಿ ವದಗಿನ್ನು
ಒಂದು ಮನದಲಿ ವದಗಿನ್ನು ನೀವೆಲ್ಲಾ
ವಂದದಾರುತಿಯಾ ಬೆಳಗುವಾ ೧

ಒಂದು ಮಾರ್ಗವಿಡಿದು ಬಂದು ಗುರುಮುಖದಿಂದ
ಒಂದನೆ ಭಕ್ತಿ ತಿಳಿದಿನ್ನು

ಒಂದನೆ ಭಕ್ತಿ ತಿಳಿದು ಪರೀಕ್ಷಿತಿಯಂತೆ
ವಂದನಾರುತಿಯಾ ಬೆಳಗುವಾ ೨

ಎರಡಕ ಮೀರದಾ ಎರಡಕ್ಷರದಿಂದ
ಎರಡನೆ ಭಕ್ತಿ ತಿಳಿದಿನ್ನು
ಎರಡನೇ ಭಕ್ತಿ ತಿಳಿದು ನಾರದರಂತೆ
ಎರಡನಾರತಿಯಾ ಬೆಳಗೀರೇ ೩

ಮೂರು ಬಲಿಯನೆದಾಟಿ ಮೂರು ರತ್ನವಗಂಡು
ಮೂರನೇ ಭಕ್ತಿ ತಿಳಿದಿನ್ನು
ಮೂರನೇ ಭಕ್ತಿ ತಿಳಿದು ಪ್ರಲ್ಹಾದನಂತೆ
ಮೂರನಾರತಿಯಾ ಬೆಳಗೀರೇ ೪

ನಾಕುಸ್ಥಾನವ ಮುಟ್ಟಿ ನಾಕರಂತವ ನೋಡಿ
ನಾಕನೇ ಭಕ್ತಿ ತಿಳಿದಿನ್ನು
ನಾಕನೇ ಭಕ್ತಿ ತಿಳಿದು ಜನಕನಂತೆ
ನಾಕನಾರತಿಯಾ ಬೆಳಗೀರೇ ೫

ಐದುಕ್ಲೇಶಗಳ್ಹಿಂಗಿ ಐದರೊಂದನೆ ಮಾಡಿ
ಐದನೇ ಭಕ್ತಿ ತಿಳಿದಿನ್ನು
ಐದನೇ ಭಕ್ತಿ ತಿಳಿದು ಗರುಡನಂತೆ
ಐದನಾರತೀಯ ಬೆಳಗೀರೆ ೬

ಆರನೇ ಭಕ್ತಿ ಆರು ಸಂಗವ ಮೀರಿ ಆರು ಪರಿಯಾಗದೇ
ಆರನೇ ಭಕ್ತಿ ತಿಳಿದಿನ್ನು
ಆರನೇ ಭಕ್ತಿ ತಿಳಿದು ಪುಂಡಲೀಕನಂತೆ
ಆರನಾರತಿಯಾ ಬೆಳಗೀರೆ ೭

ಏಳು ವ್ಯಸನವ ಬಿಟ್ಟು ಏಳು ಧಾತುವ ಕಂಡು
ಏಳನೇ ಭಕ್ತಿ ತಿಳಿದಿನ್ನು

ಏಳನೇ ಭಕ್ತಿ ತಿಳಿದು ಹನುಮಂತನಂತೆ
ಏಳನಾರತಿಯಾ ಬೆಳಗೀರೆ ೮

ಎಂಟು ಮದಗಳ ಜರಿದು ಎಂಟು ಸಿದ್ಧಿಯ ತೊರೆದು
ಎಂಟನೆ ಭಕ್ತಿ ತಿಳಿದಿನ್ನು
ಎಂಟನೇ ಭಕ್ತಿ ತಿಳಿದು ಅರ್ಜುನ ನಂತೆ
ಎಂಟನೇ ಭಕ್ತಿ ಯಾರತಿಯಾ ಬೆಳಗೀರೆ ೯

ಒಂಭತ್ತರನೇ ಬಲಿದು ಒಂಭತ್ತರ ನೆಗೆಲಿದು
ಒಂಭತ್ತರನೇ ಭಕ್ತಿ ತಿಳಿದಿನ್ನು
ಒಂಭತ್ತರನೇ ಭಕ್ತಿ ತಿಳಿದು ಬಲಿಯಂದದಿ
ಒಂಭತ್ತನಾರತಿಯಾ ಬೆಳಗೀರೆ ೧೦

ಗುರು ಮಹಿಪತಿ ಸುತಬ ಹೊರವ ದೇವಿಗೆ
ಧರಿಯೊಳೀಪರಿಯಲಿ ನೀವು
ಧರಿಯೊಳೀಪರಿ ನೀವು ಮಾಡಲಿಕೀಗ
ಪರಮ ಆನಂದಾದೋರುವದು ೧೧

## ೬೧೬

ನಿನಗಿದು ಹಿತವೇ । ಇದು ಹಿತವೇ ಪ

ಕಂಸಾರಿ ಚರಣವ ನಂಬದೇ ಕ್ಷಣಿಕದ ।
ಸಂಸಾರದಲಿ ಬೆರಿಯಬೇಡಾ ೧

ಕನ್ನಡಿಯೊಳಗಿನಾ ಹೊನ್ನಿನಾ ಗಂಟ ನೋಡಿ ।
ಕಣ್ಣಗೆಟ್ಟಿರುವರೇ ಮೂಢಾ ೨

ಬಿಸಿಲಿನ ನೀರಿನಿಂದೆ ತೃಷೆಯಾರಿಸುವದುಂಟೆ ।
ಹಸಗೆಡದಿರು ವಿಷಯ ಕೂಡಾ । ೩

ಕನಸಿನ ಸಂಪದವನೆನೆಸಿ ತಾ ಹಿಗ್ಗುವರೆ ।
ಮನವೇ ನೀ ಮಥನಿಸಿ ನೋಡು ೪

ದಾವನು ಗುರು ಮಹಿಪತಿ ಪ್ರಭು ಭಜಿಸನು ।
ಅವಗಿಲ್ಲ ಸುಖಸುರವಾಟಾ ೫

## ೬೧೭

ನಿನಗ್ಯಾಕೋ ಜನರಂಜನೆ । ವಣಾ ಭಂಜನೆ ಪ

ಎಲ್ಲವಿದ್ಯವ ಸಾಧಿಸಿ ಮೆರೆಯಬೇಕೆಂಬ ।
ಬಲ್ಲವಿಕೆ ಹೆಮ್ಮೆಗೆ ಬೀಳುರೆ ।
ಯಳ್ಳಿಗೆ ಬೆಲ್ಲವ ಹುಯಲು ಹೋದಂತವಯ ।
ಸುಳ್ಳಿನ ಭ್ರಾಂತಿ ಕಳುವರೇ ೧

ಹೆಣಗುತಿ ದೀಕ್ಷಿತನೆಂಬ ಮನ್ನಣೆಗ್ಯಾಗಿ ।
ದಣಿವರೆ ಕರ್ಮದಿ ದಣ್ಣನೆ ।
ಮುಣುಗುವವನ ತೆಲಿಮ್ಯಾಲ ಕಲ್ಲನ್ನಿಟ್ಟರೆ ।
ಗಣಿಸದೇ ದಾಟಲು ಬಲ್ಲನೆ ೨

ಶರಣ ಕೊಳಬೇಕೆಂದು ಬೂದಿ ರುದ್ರಾಕ್ಷಿಯ ।
ಧರಿಸಿ ಕಾವಿಯ ಸೋಗು ಮಾಡುವರೆ ।
ಹರುಷದಿ ಖಜ್ಜಿಗೆ ಬಿಸಿನೀರು ಹೊಯ್ದಂತೆ ।
ಮರುಳೆ ಜನ್ಮ ಸಾಧನ ಕೂಡುರೇ ೩

ಕಾಲನುಕೂಲವಿದ್ದ ಕೈಯಲಿ ಪರಗತಿ ।
ಕೀಲವರಿತು ಜ್ಞಾನ ಪಡೆವುದ ।
ಕೊಳ್ಳೆ ಹೋದ ಬಳಿಕ ಕೂಗುವ ಪರಿಯಲಿ ।
ಚಾಲವರಿದರಾಗ ಬಾರದು ೪

ಒಂದೇ ನಿಷ್ಠೆ ಒಂದೇ ಮಾರ್ಗದಿ ಮನ ।
ದಂದುಗ ಬಿಟ್ಟು ಶರಣ ಹೊಕ್ಕರೆ ।
ತಂದೆ ಮಹಿಪತಿ ಸುತ ಪ್ರಭು ಬೀರುವ ।
ಮಂದನಾಗದೇ ತಿಳಿ ಇನ್ನಾದರೆ ೫

## ೬೧೮

ನಿನ್ನ ನೀ ತಿಳಿದು ನೋಡೋ ಕೇಳಲೋ ಪ್ರಾಣಿ ಪ

ನಿನ್ನ ನೀ ತಿಳಿದು ನೋಡೋ ಪನ್ನಗಾದ್ರೀಶನ ಕೂಡೋ
ಬನ್ನ ಭವಣೆ ಈಡ್ಯಾಡೋ ಕೇಳೆಲೋ ಪ್ರಾಣಿ ೧

ನಾನಾರು ತನುವಾರು ತನುವಿ ನೊಡೆಯನಾರು
ನಾನೀ ನೆಂಬುದರೊಳಾರು ಕೇಳೆಲೋ ಪ್ರಾಣಿ ೨

ಹಿಂದಿನ ಪುಣ್ಯಗಳಿಂದ ಬಂದು ನರ ದೇಹದಿಂದ
ಬಂದೇನಾ ಫಳಿಸಿನಿಂದೇ ಕೇಳೆಲೋ ಪ್ರಾಣಿ ೩

ವಿದ್ಯಾ ವಿತ್ಪತ್ತಿ ತೋರಿ ಗದ್ಯ ಪದ್ಯಗಳ ಬೀರಿ
ಬಿದ್ದಿ ಗರ್ವಾರಣ್ಯದಾರೀ ಕೇಳೆಲೋ ಪ್ರಾಣಿ ೪

ತಂದೆ ಮಹಿಪತಿ ದಯದಿಂದ ಪಡೆಯೋ ವಿಜಯ
ಮುಂದ ಬಾರದು ಈ ಕಾಯ ಕೇಳೆಲೋ ಪ್ರಾಣಿ ೫

## ೬೧೯

ನಿನ್ನನೀ ತಿಳಿದು ನೋಡು । ಯನ್ನ ಮನವೇ ಪ

ನಿನ್ನ ನೀ ತಿಳಿದು ನೋಡು ।
ಎನ್ನ ಹಿತವು ದಾವುದೆಂದು ।

ಮುನ್ನಿನವ ಗುಣ ಜರಿದು ।
ಇನ್ನಾರೆ ನೀ ಮನವೇ ೧

ಒಳ್ಳೆವರಾ ಕಂಡು ಬಾಗಿ ।
ಸಲ್ಲದಾ ಬಡಿವಾರ ನೀಗಿ ।
ಸೊಲ್ಲವ ನಾಲಿಸು ಅವರಾ ।
ನಿಲ್ಲದೇ ನೀ ಮನವೇ ೨

ತಂದೆ ಮಹಿಪತಿ ದಯಾ ।
ದಿಂದ ಪಡೆಯೋ ವಿಜಯಾ ।
ಮಂದ ನಾಗದಿರು ಬಂದಾ ।
ಭಂದ ವಿಂದು ಮನವೇ ೩

## ೬೨೦

ನಿನ್ನವಗುಣ ಜರಿದು ಎನ್ನ ಮನವೇ ।
ನಿನ್ನವಗುಣ ಜರಿದೆನ್ನ ಮನವೇ । ಶಿರಿ ।
ಪನ್ನಗಾದ್ರೀಶನಾ ಕೂಡೋ ಸುಖ ಸೂರ್‍ಯಾಡೋ ಪ

ಕೆಲವು ಪುಣ್ಯವನೇ ಮಾಡಿ । ನರದೇಹದಲ್ಲಿ ।
ಇಳಿಯೊಳಾಗ್ರದಲಿ ಮೂಡಿ ।
ಹಲವು ಹಂಬಲಿಂದ ಗೆಳೆಯರೈವರ ಭಂದಾ ।
ಬೆಳೆಸಿ ಸದ್ಗುಣ ಬಿಡುವರೇ ಅಂಧರಾಗುವರೇ ೧

ಮರಹು ಮನೆಯನೆ ಸೇರಿ । ಮಂದತನದೀ ।
ಅರಿವ ಪಂಥದಲಿ ಜಾರಿ ।
ಅರಿಗಳಾರರ ಕೈಯಾ ಶೆರೆಯಾಗಿ ಅನುದಿನ ।
ಕೊರವನಾ ಕೋಡಗದಂತೆ ಕುಣಿದುಚಿತೆ ೨

ಒಂದೇ ನಿಷ್ಠೆಯಾ ವಿಡಿದು । ಸದ್ಭಾವದಿಂದಾ ।
ದುಂದುಗಾವೃತ್ತಿ ಕಳೆದು ।
ತಂದೆ ಮಹಿಪತಿದಯಾ ನಂದ ಪಡೆದು । ನಿನ್ನಾ
ಬಂದ ಸಾರ್ಥಕದಿ ಬಾಳು ಮುನ್ನಿನ ಕೇಳು ೩

## ೬೨೧

ನಿನ್ನ ಸ್ವಹಿತ ಮಾಡೋ ಪ್ರಾಣಿ ।
ನಿನ್ನ ಸ್ವಹಿತ ಮಾಡೋ ಪ

ಶರಣರ ಕೂಡಿ ಸ್ಥಿರ ಮನಮಾಡಿ ।
ಹರಿಯ ಕೊಂಡಾಡಿ ಪರಗತಿ ಬೇಡಿ ।
ಮರೆದು ಈಡ್ಯಾಡೀ ೧

ಹಳೆಯ ದುಃಸಂಗಾ ಕಳೆದಂತರಂಗಾ ।
ದೊಳು ಧ್ಯಾನದಂಗಾ ಬಲಿಯಲು ರಂಗಾ ।
ಹೊಳೆವ ಕೃಪಾಂಗಾ ೨

ಸಂದೇಹಲಿಂದು ಧರೆಯೊಳು ಬಂದು ।
ಮರೆವದು ಕಂಡು ಗುರುಮಹಿಪತೆಂದು
ಗುರುತಕ ಹೊಂದು ೩

## ೬೨೨

ನೀನೇ ನಿನ್ನ ಮರೆದಿಹುದೇನು ಮನವೇ ।
ಸುಜ್ಞಾನದಿಂದ ನಿಜವನೀ ನರಿಯಲಿಲ್ಲವೇ ಪ

ಶ್ವಾನ ಸೂಕರಾದಿ ಅತಿ ಹೀನ ಯೋನಿಯಲಿ ಸುಖದೊಳು ।
ನಾನಾ ಪರಿಯಲಿ ಬಾಹುದೇನು ಅನುವೇ ೧

ಹರಿವ ಮೃಗಜಲಕ ಬೆಂಬತ್ತಿ ಪೋಪಾ ಹರಿಣನಂತೆ ।
ಹರಿದು ವಿಷಯ ಕೂಡಾ ಕೆಡುದೇನು ಗುಣವೇ ೨

ನಿನ್ನ ಬಯಕೆಯಂತಾದಡೆ ಮನ್ನಿಸುವ ಅಲ್ಲದಡೆ ।
ಘನ್ನ ಚಿಂತೆಯೊಳು ಬೀಳುತಿಹುದೇನು ಸುಖವೇ ೪

ನೆನೆದು ತರಿಸು ಮಹಿಪತಿ ಚರಣಾ ಚಿನ್ನ ಕೃಷ್ಣ ನಾ ।
ತನುವಿನೊಳಗಾಡುತಿಹ ನಿಜ ಮನವೇ ೫

## ೬೨೩

ನೀ ಯಾಕ ಮನವೇ ಚಿಂತಿಸಿ ಬಳಲುವೆ ಬರಿದೇ ।
ಶ್ರೀಯರಸನ ಮೊರೆ ಹೋಗದೇ ಪ

ಸಾಧುರಾ ಸಂಗ ಜರಿದು ಕುಜನರ ನೆರೆವಿಡಿದು ।
ಮೇದಿನಿಯೊಳು ನಿನ್ನ ನೀ ಮರೆದು ೧

ಇರಲು ಮುಳ್ಳಿನಾಗ್ರದಲಿ ಹೀನ ಕೀಟಕಾವಳಿ ।
ಪೊರೆವಾನಿತ್ತು ಆಹಾರದಯಲೀ ೨

ಮನುಜರಿಗೆ ತಲೆವಾಗಿ ಗೇಣು ವಡಕಲಾಗಿ ।
ಮನಸಾ ಹಿಡಿವರೇ ಪರರು ಹೋಗಿ ೩

ಹುಟ್ಟಿಸಿದಾ ದೇವನು ಹುಲ್ಲು ಮೇಯಿಸುವನೇನು ।
ಅಷ್ಟಾಸಾಯಸ ಬಡದಿರು ನೀನು ೪

ಹೊಂದಿರು ಅನುದಿನ ಗುರುಮಹಿಪತಿ ಚರಣಾ ।
ತಂದಿದಿರುಡುವ ನಿಧಾನಾ ೫

## ೬೨೪

ನೀವು ಬರಿದೆ ಸಾಯಸ ಬಡ ಬ್ಯಾಡಿ ಪ

ಗುರುವಿಗೆ ಬಾಗದೆ ಗುರುರತವ ಕೇಳದೆ ।
ಬರಡ ಸಾಧನವನೇ ಕೂಡಿ ೧

ತನ್ನೊಳು ಕಸ್ತೂರಿ ಮುನ್ನರಿಯದೆ ಮೃಗ ।
ಕಣ್ಣಗೆಟ್ಟಂತೆ ತಿರುಗಾಡಿ ೨

ತಂದೆ ಮಹಿಪತಿ ನಂದನು ಸಾರಿದಾ ।
ಮಂಥರ ಧರನ ಕೊಂಡಾಡಿ ೩

## ೬೨೫

ನೆನಿ ಮನವೇ ಪಾವನ ದೇವನ ಚರಿತ ಕಥನುವೇ ।
ನಿನಗಿದ–ವನಿಲಿ ನೆಚ್ಚಿರೆ ತನುವೇ ಪ

ಘನ ಶ್ಯಾಮನದಯ ಪಡಿಯದ ಸಾರ್ಥಕ ।
ಜನುಮಗಳೇವದಿದು ಗುಣವೇ ಅ.ಪ

ಸುರಲೋಕ ಮೊದಲಾದ ಸುರಪ ವಿಚ್ಛೈಸಿ ।
ಪರಿ ಪರಿ ಸಾಧನ ಮಾಳ್ಪರೆ ।
ಸುರಭಿಯಿರಲು ವಿಡಿಸದ ಪುಳಿ ಪಾಲವ ।
ಕರೆಸುವೆನೆಂದು ಅರಸುವರೇ ೧

ಗುರು ಶರಣ ನಿಷ್ಠೆಯೊಂದ್ಹಿಡಿಯದೇ ಕಂಡಾ ।
ಧರೆಯ ದೈವಕ ತಲೆವಾಗುವರೇ ।
ಸುರ ತರುವಿನ ನೆರಳವನೇ ತ್ಯಜಿಸಿ । ಬ।
ರ್ಬುರ ದ್ರುಮವನು ಸಾರುವೇ ೨

ವಿಕಳಿತ ಮಾಡುವ ತಾಪತ್ರಯದಾ ।
ಸಕಲ ಹಳಾಹಳ ತ್ಯಜಿಸೀ
ಅಖಿಳ ಜೀವನದೊಡಿಯನ ಸದ್ಮೂರ್ತಿಯ ।
ಹೃತ್ಕಮಲದೊಳಗಿರಿಸೀ ೩

ಹರಿಮಹಿಮೆಯ ಕೊಂಡಾಡುತ ಪೊಗಳುತ ।
ಬೀರುತ ಗುರು ಭಕುತರಿಗೇ ।
ಪರಮ ಸದ್ಭಾವದ ಭಕುತಿಲಿ ಮುಣುಗೈನ ।
ವರತ ಪ್ರೇಮಾರ್ಣವದೊಳಗೇ ೪

ನಯನದಿಂದಲೀ ಸ್ಮರಿಸುವ ಬಹು ಶರಣರ ।
ಭಯವ ನಿವಾರಣ ಮಾಡುವ ।
ದಯದಲಿ ಮಹಿಪತಿ ನಂದನ ಪಾಲಿಸು ।
ತಿಹಕರುಣಾಕರ ಮಾಧವಾ ೫

## ೬೨೬

ನೆನಿ ವನಜನಾಭನ ಮನವೇ ಪ

ನೆನಿ ವನಜನಾಭನ ಮನವೇ । ಭವ ।
ದಣಿವಿರೆ ಹಿಂಗಿಸು ಮನವೇ ।
ಈ ತನುವಾ ಸುಖದನುವಾ ।
ನಿಜ ಘನವಾ ಮಾಡರ್ಪಣವಾ ೧

ಶರಣಾಗತರೆಂದಿಗೆ ತೊರೆಯಾ । ಭವ ।
ಶರಧಿಲಿ ಕೈಯ್ಯಾ ಜರಿಯಾ ।
ಆಕರಿಯ ಕೇಳಿ ಮೊರಿಯಾ ।
ಬಂದರಿಯಾ ನೀ ಮರೆಯದೇ ೨

ನುತ ಮಹಿಪತಿ ಸುತ ಸಾರಥಿಯ ಪಾ
ಡುತ ನಿರ್ಮಳ ಕೀರುತಿಯಾ ।
ಶ್ರೀಪತಿಯ ಮೂರುತಿಯಾ ।
ಪದ ದ್ವಿತಿಯಾದಿ ರತಿಯಾಲಿ ೩

## ೬೨೭

ನೆಲಿಗೆ ಬಾರದು ಗುರುವೇ ಮನವಿದು ಪ

ಒಳ್ಳೆಯವರಾ ನಡೆ ಕಂಡು । ಎಳ್ಳನಿತು ಸಾಚದು ।
ಖುಳ್ಳರ ಮನದಲ್ಲಿ ಬೆರೆಸುವದು ೧

ಚರಟ ಮಾತುಗಳಲ್ಲಿ ಹರುಷವ ಬಡುವರು ।
ಪರಮ ಸದ್ಭೋಧದಲ್ಲಿ ತೊಳಗುವದು ೨

ಏನ ಹೇಳಿದರೇನು ಜ್ಞಾನವ ಕೊಳ್ಳದು ।
ತಾನೆ ತನ್ನಿಚ್ಛೆಯಲಿ ತಿರುಗುವದು ೩

ಸ್ಥಿರವಾಗುವ ಪರಿಯಲಿ ಕರುಣವ ಮಾಡುವುದು ।
ಸರಣೆ ಸರಪಳಿ ನಿಕ್ಕಿ ನಿಲಿಸುವುದು ೪

ಸನ್ನುತ ಮಹಿಪತಿ ಚೆನ್ನನ ಹೊರೆವದು ।
ಧನ್ಯಗೈಸಲು ಮನವ ತಿದ್ದುವದು ೫

## ೬೨೮

ನೋಡಿ ನೋಡಿ ನಿಮ್ಮೊಳು ಪ

ನೋಡಿ ನೋಡಿ ನಿಮ್ಮೊಳು ನಿಜವಾ ನೋಡಿರ್ಯೋ ।
ಬ್ಯಾಡಿ ಬ್ಯಾಡಿ ಮೈಯ್ಯ ಮರಿಯ ಬ್ಯಾಡಿರ್ಯೊ ।

ಮಾಡಿ ಮಾಡಿ ಸ್ವಹಿತವನು ಮಾಡಿರ್‍ಯೋ ।
ಪಾಡಿ ಪಾಡಿ ಅಚ್ಚುತನ ನಾಮ ಪಾಡಿರ್‍ಯೋ ೧

ಕೇಳಿ ಕೇಳಿ ಸದ್ಬೋಧವನೆ ಕೇಳಿರ್‍ಯೋ ।
ಬಾಳಿ ಬಾಳಿ ಸತ್ಸಂಗದಲಿ ಬಾಳಿರ್‍ಯೋ ।
ಕೇಳಿ ಕೇಳಿ ಮದಮತ್ಸರವಾ ಕೇಳಿರ್‍ಯೋ ।
ತಾಳಿ ತಾಳಿ ವಿವೇಕ ಗುಣವಾ ತಾಳಿರ್‍ಯೋ । ೨

ಕೂಡಿ ಕೂಡಿ ತಂದೆ ಮಹಿಪತಿ ಕೂಡಿರ್‍ಯೋ ।
ನೀಡಿ ನೀಡಿ ತನುಮನಧನ ನೀಡಿರ್‍ಯೋ ।
ಬೇಡಿ ಬೇಡಿ ಗತಿ ಮುಕ್ತಿಗಳ ಬೇಡಿರ್‍ಯೋ ।
ಮಾಡಿ ಮಾಡಿ ಸಾರ್ಥಕ ಜನ್ಮ ಮಾಡಿರ್‍ಯೋ ೩

## ೬೨೯

ನೋಡಿರ್ರೈ ಜನಾ ರಂಜನೆಯಲ್ಲಿ । ನೋಡಿರ್ರೈ ಜನಾ ।
ಮಾಡದೆ ಹಿರಿಗುರು ಭಕ್ತಿಯ ಶೀಲದಿ ।
ರೂಢಿಯ ಡಂಭಕ ಹರಿದಾಡುವದು ಪ

ಸಾಧು ಸಂತರ ಮನೆಯಲ್ಲಿ । ಆದರವಿಲ್ಲಾ ಮನದಲ್ಲಿ ।
ಮೇದಿನಿಯಲಿ ನುಡಿಸಿದ್ಧಿಯ ಹೇಳಲು ।
ಸಾಧಿಸಿ ಹೋಗುತ ಬಾಗುತಲಿಹುದು ೧

ಚಂದನವಿಡಿದು ತೆಯ್ವಲ್ಲಿ । ಒಂದು ಬಾರದು ನೊಣವಲ್ಲಿ ।
ಕುಂದದೆ ಎಂಜಲ ತೊಳೆವಾಸ್ಥಳದಲ್ಲಿ ।
ಸಂದಿಸಿ ಮುಕುರುವ ಸಂದಲಿ ಯಂದದಿ ೨

ಪರಗತಿ ಸಾಧನ ವರಿಯರು । ಬರಿದೆ ಭ್ರಾಂತಿಗೆ ಬೆರೆವರು ।
ಗುರುಮಹಿಪತಿಸುತ ಪ್ರಭು ಕಲ್ಪತರು ।
ಸೇರದೆ ಬೊಬ್ಬುಲಿ ಮರಕೆಳಗಾಡುವ ೩

## ೬೩೦

ನೋಡು ನೋಡು ನಿನ್ನ ಹಿತವಾ ಪ

ಇಂದು ನರದೇಹದಲ್ಲಿ ಬಂದುದೇನೋ ।
ಒಂದು ಪಥವರಿಯದಾ ಛಂದವೇನೋ ಅ.ಪ

ಗುರುವಿನಂಘ್ರಿಯ ಕಂಡ ಗುರುತ ಅನುಭವನುಂಡ ಸೈಸೈ ।
ಕರುವೇ ಬಾರೆನ್ನುತಾ ಸೈಸೈ । ಶರಣ ಬಾರೆನ್ನುತಾ ಸೈಸೈ ।
ಹರಿಯ ಭಕ್ತ ನೆನ್ನುತಾ ಧರಿಯೊಳ್ಳಿಂಗ ಹಿರಿಯರಿಂದ ।
ಕರಿಸ ಕೊಳ್ಳಲಾಗದೇ । ಬರಿದೆ ಭ್ರಾಂತಿಗೆ ಬಿದ್ದು ।
ಬರಡ ಜನ್ಮ ಮಾಡ ಬ್ಯಾಡಾ ೧

ಸಾಧು ಸಂತರಲ್ಲಿಗೆ ಹೋಗಿ ಮದಗರ್ವ
ನೀಗಿ ಕೇಳು ಕೇಳು ।
ಬೋಧ ಸಾರಾಯವ ಕೇಳು ಕೇಳು ।
ಆದಿ ಸನ್ಮಾರ್ಗವ ಕೇಳು ಕೇಳು ।
ಭೇದಿಸುವ ಶೀಲವ ಗಾದಿ ಮಾತುಗಳಲ್ಲಾ
ಸಾಧನವ ಬಲಿಯೋ ನೀ ।
ಕಂದ ಭೂಮಿಯ ಮೇಲೆ ಹನಿ ಮಾಡದೇ ೨

ಗುರುಮಹಿಪತಿಸ್ವಾಮಿ ಅರ್ಥವಿನೊಳಗೆರಕವಾದ ಧೀರ ಧೀರ।
ನೀರು ಪದ್ಮ ಹೋಲುವಾ ಎರಡು ಸಮನಿನಿಸಿ ಸುಖ ।
ಭರಿತರಾದ ಪರಿಯಲಿ ಹರಿಯ ಧ್ಯಾನ ಬಲಿಯೋ ಮೈಯ್ಯ ।
ಮರೆಯಬೇಡಾ ಮನವೇ ೩

## ೬೩೧

ನೋಡು ಗರ್ವ ಹಿಡಿಯ ಬ್ಯಾಡಾ ಪ

ಜಗದೊಳಗ ಹಿತ ಮಾಡಿಕೊ ।
ಸಂತರೊಳು ಕೂಡಿ ನೀ ಪ್ರಾಣಿ ಅ.ಪ

ಸುರಪದ ಮದ–ಗಜವೇರಿ ಸುರಸೈನ್ಯದಿಂಬರಲು ।
ಕರುಣದಿಂ ದೂರ್ವಾಸ ಸರ್ವ ಕುಡಲು ।
ಕೊರಳಿಗಿಕ್ಕದೆ ಬಿಡಲು ಧರೆಗೆರಗುವದ ಕಂಡು ।
ಮೊರೆದು ಕೋಪಿಸಲು ಸಿರಿಹರದ್ಹೋಯಿತು ಪ್ರಾಣಿ ೧

ನೃಪತಿ ನಹುಷನನು ಯಜ್ಞ ಅಪರಿಮಿತ ಮಾಡಿ ನಿಜ ।
ಉಪಬೋಗಿಸದೆ ತಾ ಸುರಪ ಪದವಿಯಾ ।
ವಿಮಲ ಋಷಿಯರ ಕೂಡ ಅಪಹಾಸ ಮಾಡಲಿಕೆ ।
ಶಪಿಸಲಾಕ್ಷಣ ಉರಗಾಧಿಪನಾದ ಪ್ರಾಣಿ ೨

ಗರ್ವ ತಪಸಿಯ ವೈರಿ ಗರ್ವ ವಿದ್ಯಕ ಹಾನಿ ।
ಗರ್ವದಿಂ ಕೆಡಬಹುದುರ್ವಿಯೊಳಗ ।
ಸರ್ವಥಾ ಬ್ಯಾಡೆಂದು ಹೊರೆಯೊ ಗುರು ಮಹಿಪತಿ ।
ಅರ್ಥವನು ಕೊಟ್ಟೆನಗ ಸರ್ವರೊಳು ಪ್ರಾಣಿ ೩

## ೬೩೨

ನೋಡೊ ನೋಡೋ ನಿನ್ನೊಳು ನಿಜಾ ಪ

ಮೂಢತನವ ಬಿಟ್ಟು ಕೂಡಿ ಭಾವ ಭಕ್ತಿಯಾ ।
ಪಾಡಿ ಕೊಂಡಾಡಿ ಸೂರ್ಯಾಡೆಲೋ ಹರಿನಾಮಾ ಅ.ಪ

ನಾನು ನನ್ನದು ಯಂದು ಹೀನ ವೃತ್ತಿಗೆ ಬಿದ್ದು ।
ನಾನಾ ಬವಣೆಯಲ್ಲಿ ತೊಳಲುತ ತೊಳಲುತ ।
ಗಳೆವರೇ ದಿನವನು ೧

ಸನ್ನುತ ಗುರುಪಾದ ಮನ್ನಿಸಿ ಪಡೆಯಲೋ ಬೋಧಾ ।
ಬನ್ನ ಬಡುವದೇನು ಕಣ್ಣದೆರೆನ್ನಾರೆ ತನ್ನತಾ ಮರೆವರೆ ೨

ಗುರುಮಹಿಪತಿ ಸ್ವಾಮಿ ಸುರಮುನಿಜನ ಪ್ರೇಮಿ ।
ಮೊರೆ ಹೊಕ್ಕವರ ಕೈಯ್ಯಾ ಜರಿಯೂತಾ ಮರಿಯಾ ।
ನೀ ನರಿಯದೆ ಕೆಡಬ್ಯಾಡಾ ೩

## ೬೩೩

ನಂಬಿಗಿಲ್ಲಾ ಈ ಮನಸಿನಾ ಪ

ಒಂದು ನೆನೆಯೆ ಮತ್ತೊಂದು ನೆನೆಯುತಾ ।
ಒಂದರೆ ಘಳಿಗೆ ಹೊಂದದೆ ಸದ್ಗುಣ ।
ಅಂಧ ಕೂಪ ಹೋಗುವಂದದಿ ವಿಷಯ । ಮ ।
ದಾಂಧದಿ ಜೀವನ ಬಂಧಿಸುದೈಯ್ಯಾ ೧

ಧೀರ ಶಾಸ್ತ್ರ ವಿಚಾರ ಕರ್ಮದಿ ।
ಶೂರರ ತಪ ವಿಹಾರರ ಜಗದೊಳು ।
ಆರಾದರಾಗಲಿ ಕ್ರೂರ ಕರ್ಮದಾ ।
ಗಾರ ಹುಗಿಸಿ ಘನ ಹೊರುವದೈಯ್ಯಾ ೨

ಪುಣ್ಯದ ದಾರಿಗೆ ಕಣ್ಣವ ದೆರಿಯದು ।
ಅನ್ಯಾಯದಿ ಒಡಲನೇ ಹೊರುವದು ।
ಸನ್ನುತ ಮಹಿಪತಿ ಚಿನ್ನನ ಪ್ರಭುದಯ ।
ಮುನ್ನಾದರ ಇನ್ನಾನರಿಯೇ ೩

## ೬೩೪

ನಂಬಿರೋ ಮನವನುದಿನಾ ಪ

ನಂಬಿರೋ ಮನವನುದಿನಾ ।
ನಂಬಿದರಿಂಬಾಗುವನಾ ೧

ಸುರಮುನಿರಂಜನು ಸುರರಿಪು ಭಂಜನಾ ।
ನಿರುಪಮ ಕಂಜನಯನ ವದನಾ ೨

ಈರೆರಡಾಸ್ಯನ ಪಿತ ಪದ್ಮಾಸ್ಯನೆ ।
ಈ ರೈದಾಸ್ಯನ ಕೊಂದವನಾ ೩

ಅಸುರನ ಕಂದನ ನುಳಹಿದಾ ನಂದನ ।
ವಸುದೇವ ಬಂಧನ ಹರಿಸಿದನಾ ೪

ಇಹಪರ ವಂದ್ಯನ ದೇವಕಿ ಕಂದನ ।
ಮಹಿಪತಿ ನಂದನ ಜೀವನಾ ೫

## ೬೩೫

ಬಗಿಯಲಿ ಬ್ಯಾಡಣ್ಣಾ । ಮದದಲಿ ಪ

ಒಳ್ಳೆವರಾ ನುಡಿಯಳ್ಳಲಿ ಮಾಡಿ ।
ಖುಳ್ಳತನದಲೆ ದಿನ ಹೋಗಾಡಿ ೧

ಅವರಿಗೆ ಮಾನವ ಸರಿ ಬಗಿಬ್ಯಾಡ ।
ಹವಣಿಸಿ ಚರಣಕ ನಮಿಸೆಲೋ ಮೂಢಾ ೨

ಶಿಷ್ಟಗೆರಗನು ದಾವನು ಬಾಗಿ ।
ಹುಟ್ಟುವ ಕಾಡ ಬೊಬ್ಬುಲಿ ಮರವಾಗಿ ೩

ಸಣ್ಣ ದೊಡ್ಡವರೆನಬಾರದು ಕೇಳು ।
ಮನ್ನಣೆ ಗೆಲ್ಲಗವರೇ ಮೇಲು ೪

ಗುರುವರ ಮಹಿಪತಿ ಸಾರಿದ ನಿಜವಚನಾ ।
ಧರೆಯೊಳಗಿದೆ ಪರಗತಿ ಸೋಪಾನಾ ೫

## ೬೩೬

ಬರಿದೆ ದಣಿಯಬೇಡಿ ।
ಬಯಲ ಸಾಧನ ಕೂಡಿ ।
ನೆರೆ ಮಾಡಿ ಸಾಧು ಸಂತರಾ ।
ದಯವಂತರಾ ಪ

ಏನು ಓದಿದರೇನು ।
ಏನು ಕೇಳಿದರೇನು ।
ಜ್ಞಾನಿಗಳೊಡನಾಡದೇ ।
ಅನುಭವವಾಗುದೇ ೧

ಬುಡದಲಿ ಫಲವಿದೆ ।
ತುದಿಮರನೇರುವರೇ ।
ಬಿಡು ಬಿಡು ನಾನಾ ಸಾಯಸಾ ।
ಭ್ರಾಂತಿ ವೇಷಾ ೨

ಗುರು ಮಹಿಪತಿ ನುಡಿ ।
ಸಾರಿದ ನಂದ ನೋಡಿ ।
ಮರೆಯದೆ ಮಾಡಿ ಸಾಧನಾ ।
ಹರುಷ ನಿಧಾನಾ ೩

## ೬೩೭

ಬಾಧಕರೊಳು ಬದ್ಧನು ।
ಮಧುಸೂದನ ಭಕ್ತಿಗೆ ದೃಢವಿಲ್ಲದವನು ಪ

ಧರೆಯೊಳು ನೋಡಲು ಕೊಳಲುಂಟು ಕೊಡಲುಂಟು ।
ಹರಿಪರದೈವೆಂದು ಹೇಳುವನು ।
ದುರಿತವು ಬಂದಡೆ ನೀಚದೈವಂಗಳಿ ।
ಗೆರಗಿ ಕೊಂಡಾಡುವ ಸಂದೇಹಿ ಆತ್ಮಾ ೧

ನಾನಾ ಶಾಸ್ತ್ರವನೋದಿ ಕಾಂಚನದಾಶೆಗೆ ।
ಹೀನ ನೃಪರ ವಾಲ್ಗೈಸುವನು ।
ಈ ನಿಖಿಳದ ವ್ರತ ಜಪ ತಪವನು ಮಾಡೀ ।
ನಾನೆಂಬ ಹಮ್ಮಿಲಿ ಪರರನು ಹಳಿವಾ ೨

ವಾಸುದೇವ ಸರ್ವಯಂಬುವ ದೇವರ ।
ದಾಸರ–ಸೂಯದಿ ಬಾಳುವನು ।
ಲೇಸಾಗಿ ಗುರುವರ ಮಹಿಪತಿಸ್ವಾಮಿಯ ।
ಧ್ಯಾಸವಿಲ್ಲದೆ ವಣಡಂಬದಲ್ಲಿಹನು ೩

## ೬೩೮

ಬಿಡು ಬಿಡು ಆತ್ಮ ಸ್ತುತಿಯನು ಪರನಿಂದೆಯನು ಪ

ತನ್ನ ಗುಣವ ತಾನೇ ಹೊಗಳುತಲಿ ।
ಅನ್ಯರ ದೂಷಿಸಲೇನು ೧

ತಾ ಕೋಡಗ ಮರಿ ಬನ ಹಳಿವಂತೆ ।
ವ್ಯಾಕುಳ ಹಿಡಿದರೆ ತಾನು ೨

ಮಹಿಪತಿ ಸುತ ಪ್ರಭು ಬೋಧವ ಕೇಳುತ ।
ಸ್ವಹಿತವ ಪಡಿಯೋ ನೀನು ೩

## ೬೩೯

ಬಿಡು ಭ್ರಾಂತಿಯನ್ನು ಮಾನವ ನಿನ್ನಾ ।
ಪಡೆದು ಕೊ ಸದ್ಗತಿಯನು ಪ

ತಡಿಯದೇ ಸದ್ಗುರು ಅಡಿಗಳ ಪೂಜಿಸಿ ।
ಒಡನೆ ಭವಾಂಭವಾಂಬುಧಿ ಥಡಿಯವ ಸಾರೆಲೋ ಅ.ಪ

ಪತ್ರೇಂದ್ರವಾಹನನು । ಮಣಿಗಣ
ಸೂತ್ರದಂದದಿ ಜೀವನು ।
ಚಿತ್ರ ವಿಚಿತ್ರದಲಿ ಅಡಿಸುವ । ಗು ।
ಣತ್ರಯ ವಾದಲಿ ।
ಪುತ್ರ ಕಳತ್ರ ಸುಮಿತ್ರ ಸಮಂಧ ।
ಧತ್ರಿಲಿ ಮಾಯ ಚರಿತ್ರವಿದೆಂದು ೧

ತಾನಾರು ತನುವಾರದು ತನುವಿನ ।
ತಾನೀ ಸಂಮಂಧವಾರದು ।
ಜ್ಞಾನಿಗಳನು ಮತದಿ ತಿಳಿದು ನೋಡು ।
ಸ್ವಾನುಭವದ ಬೋಧದೀ ।
ಹಾನಿ ಯಶ _ ಸುಖ ಮಾನಾಪಮಾನವು ।
ಮಾನವರಿಗೆ ಪ್ರಾಚೀನ ಫಲೆಂದು ೨

ಹಿಂದಾದ ನೆನಹಿಸದೇ ವಾಸನೆಗಳ ।
ಮುಂದೇನು ಕಾಮಿಸದೇ ।
ಬಂದದ ಅನುಭವಿಸಿ । ಕ ।
ನಸಿನಾನಂದ ವಿದೆಂದು ಭಾವಿಸೀ ।
ತಂದೆ ಮಹಿಪತಿ ಕಂದಗ ಸಾರಿದ ।
ದ್ವಂದ್ವಗೆಲಿದು ಗೋವಿಂದ ನೆನೆಯುತ ೩

## ೬೪೦

ಬಿಡು ಬಿಡು ವಣಮಾತಿನ ಸೊಗಸು ।
ಕುಡಿ ಸ್ವಾನಂದ ಬಳ್ಳಿಯ ಚಿಗಿಸು ಪ

ಶೃತಿ ಶಾಸ್ತ್ರಜ್ಞಾನವ ಪಡೆದು ।
ಕ್ಷಿತಿಯೊಳು ಹೆಮ್ಮೆಯ ಮದ ಜಡಿದು ।
ಪ್ರತಿಯನಗಿಲ್ಲೆನುತಲಿ ನುಡಿದು ।
ಮತವಾದಕ ನಿಲುವರೆ ನಡದು ೧

ಅಂಜನಿಲ್ಲದ ಉಪಕರಣದಂತೆ ।
ವ್ಯಂಜನಿಲ್ಲದ ಪಾಕಗಳಂತೆ ।
ರಂಜನಿಗನುಭವ ದೂರಂತೆ ।
ಕಂಜನಾಭನ ನೆನೆವಂತೆ ೨

ತನ್ನೊಳು ನಿಜಘನದಾವರತಾ ।
ಮುನ್ನಾದನು ಶಬ್ದಕ ಹೊರತಾ ।
ಇನ್ನಾರ ಬೆರಿ ಸಂತರ ತ್ವರಿತಾ ।
ಮನ್ನಿಸಿ ಮಹಿಪತಿಜನಗುರುತಾ ೩

## ೬೪೧

ಬಿಡು ಬಿಡು ಮನವೇ ನಿನ್ನಾ ದುರ್ಗುಣದಾ ಸಂಗಾ ।
ಪಿಡಿಯೋ ಸಾಧುಜನರಾ ನೆರಿಯಾ ಕಾವಾ ಶ್ರೀರಂಗಾ ಪ

ನೆನೆಯಲಿಕ್ಕೆ ವಿಷಯ ಸಂಗದಿಂದ ಕಾಮ ಕ್ರೋಧ ।
ಜನಿಸಿ ಮೋಹ ಸ್ಮತಿಯಗೆಟ್ಟು ಕೆಡುವಿ ಮತಿಮಂದ ೧

ಗರಳ ವೇರಿದವಗ ಬೇವು ಸಿಹಿ ದೋರುವಂತೆ ।
ನಿರುತ ಇಂದ್ರಿಯ ವಿಷಯ ಸುಖವು ಅದರಂತೆ ೨

ಪಿತ್ತವಡರಿದಾಗ ಎಂತು ಲೋಕ ತಿರುಗಿಹುದು ।
ಮತ್ತ ಗುರು ಹಿರಿಯರ ಬಗೆವೀ ಮನುಜರಿವರೆಂದು ೩

ಎಂತು ಹೇಳಲಿ ನಿನಗ ಹರಿನಾಮ ನಂಬುಗೆಯಿಲ್ಲಾ ।
ಪಂಥದರವ ಜ್ಞಾನದ ದೃಷ್ಟಿ ತೆರೆಯದಾಯಿತಲ್ಲಾ ೪

ತಂದೆ ಮಹಿಪತಿ ಸ್ವಾಮಿ ನಮಿಸಿ ಕೇಳು ಹಿತವಾ ।
ಮಂದಭವದಿ ತೊಳಲ ಬ್ಯಾಡಾ ಹೊಂದು ನಿಜಪಥವಾ ೫

## ೬೪೨

ಬಿಡು ಬಿಡು ವಾಜಿಥರವಲ್ಲಾ । ಪ್ರಾಣಿ ಪ

ಕಡಲಶಯನೆಚ್ಚರ ಗಳದೆಲ್ಲಾ ।
ಬಿಡದೇ ನಿನ್ನ ನೀ ಮರೆವುದು ಸಲ್ಲಾ ।
ಎಡಬಲ ನೋಡದೆ ನೀ । ವಿಡಿ ಗುರುಗಳ ಅಡಿಗಳ ।
ದೃಢದಲಿ ಒಡಲ್ಹೊಕ್ಕು ಪಡಿ ನಿಜಗತಿಯಾ ೧

ಏಸು ಜನ್ಮವ ಸುತ್ತಿ ಬಂದ್ಯೋಯತ್ತಿ ।
ನ್ನೇಸು ಜನ್ಮವ ತಾಳಬೇಕು ಮುಂದ ।
ಹೇಸಲಿಲ್ಲವನೊಂದು ಘಾಸಿಯಿಂದ ।
ಅಶನ ವ್ಯಸನ ತೃಷಿ ಭಸಿಯೊಳು ನಿಶಿದಿನ ।
ಪಶುವಿನ ಪರಿಯಲಿ ದೆಶೆಗೆಡ ಬ್ಯಾಡಾ ೨

ಎಂತು ಹೇಳಲಿನ್ನು ಮನವೇ ನಾನು । ಸಾಧು ।
ಸಂತರ ಸಂಗದಿ ಬಾಳು ನೀನು ।
ಅಂತರಂಗದಿ ಹರಿ ಮೂಡುವನು ।
ಹಿತಾಹಿತ ನರಿತು ಸುಮತಿಯಲಿ ಗುರು ಮಹೀ ।
ಪತಿ ಸುತ ಪ್ರಭು ಸ್ತುತಿರತಿಯಲಿ ಬಾಳು ೩



## ೬೪೩

ಬೆಳಿಯೋ ಬೆಳಿ ಮನವೇ
ಬೆಳಿಕಂಡ್ಯಾ ಬೆಳಿ ಮನವೇ ಬೆಳಿ ನಿನ್ನ ಹೊಲವನು ।
ಇಳೆಯೊಳು ಯಣಿಗಾಣದ್ವಾಂಗೆ ೧

ಗುರುವಿನಭಯ ಕೊಂಡು ಸತ್ವದಾ ಹೊಲ ಹಿಡಿದು ।
ಜರಿದು ಸಂಗಿಗಳನ್ನೆಲ್ಲಾ ೨

ವಿವೇಕವೇಯಂಬಾ ನೇಗಿಲ ಎಂಟು ।
ಭಾವವೆಂಬೆತ್ತುಗಳಿಂದ ೩

ದೃಢಪಾಶದಿಂದಲಿ ಕಟ್ಟಿ ಯಚ್ಚರವೆಂಬಾ ।
ಒಡನೆ ಶಿಕ್ಷದಿ ನಡೆಸುತಾ ೪

ಜ್ಞಾನ ಭಕ್ತಿ ವೈರಾಗ್ಯ ತಾಳದ ಬಲದಿ ।
ಅನನ್ಯ ಭಾವ ಕೂರಿಗೆಯಿಂದಾ ೫

ಗುರು ಕರುಣ ಮಳೆ ಗರೆಯೆ ವೇದಾಂತ ಬೀಜ ।
ಭರದಿ ಬಿತ್ತಿ ನಾದುವಂತೆ ೬

ಅನುಮಾನ ಕಸ ತೆಗೆದು ಬೋಧವ ಯಡಿಹಾಯ್ದು।
ಧನಗಾಳ ತುಂಬಿಡುವಂತೆ ೭

ವರಕ್ಷೋಭ ಯಂಬಾ ನುಡಿ ಹಕ್ಕಿ ಬರಗುಡದೆ ।
ಪರಮ  ಜಾಗೃತಿಯ ಕವಣಿಯಿಂದಾ ೮

ಬೇರೆ ಬೇರೆ ದೋರ್ವುದೆಲ್ಲಾ ವಬ್ಬುಳಿ ಮಾಡಿ ।
ಸಾರಿಹ ಶೃತಿ ವಾಕ್ಯದಿಂದ ೯

ದೋರುವಾ ದೃಶ್ಯ ಹೆಕ್ಕಲ ಬಿಟ್ಟು ವಳಗಿರುವ ।
ತೂರಿ ಅಹಂಭಾವ ಹೊಟ್ಟವನು ೧೦

ದೈನ್ಯವನು ಹಿಂಗಿ ಬಳಕೊಂಡು
ಅನ್ಯರಾ ಮರೆ ಹೋಗದಂತೆ ೧೧

ಪರಿಪೂರ್ಣವಾದ ಬಳಿಕ ಒಕ್ಕಲು ತನಕ ।
ಮರುಳೆ ನೀ ಸಿಕ್ಕದಿರು ಕಂಡ್ಯಾ ೧೨

ತಿರುಗಿ ಸಂಚಿತ ಸರ್ವ ಬಿಡಿಸಿಕೊ ಸುತ ಪ್ರಭು
ಗುರು ಮಹಿಪತಿ ವಲುಮೆಯಿಂದಾ ೧೩

## ೬೪೪

ಬಂದು ಬಾರದಾಯಿತು ನೋಡಿ ।
ಇಂದು ನರದೇಹ ಸಂಗವ ಮಾಡಿ ಪ

ಮುತ್ತಿನಂಥಾ ಜನುಮದಿ ಬಂದು ।
ಚಿತ್ತ ಬೆರಿಯನು ವಿಷಯದಲಿಂದು ೧

ಸಾಧು ಸಂತರ ಮೊರೆ ಹೋಗಲಿಲ್ಲಾ ।
ಹಾದಿ ತಪ್ಪಿ ಮುಕ್ತಿಯು ಹೋಯಿತಲ್ಲಾ ೨

ಆಹಾರ ನಿದ್ರೆ ಭಯ ರತಿಸಂದಾ ।
ಅಹರ್ನಿಶಿಯಲಿದೇ ಮನದಂಗಾ ೩

ನಾನಾ ಶಾಸ್ತ್ರದ ಮಾರ್ಗಕ ಹೋದೀ ।
ಗಾಣದೆತ್ತಿನಂದದಿ ಕುರುಡಾದಿ ೪

ತಂದೆ ಮಹಿಪತಿ ಸ್ವಾಮಿಯ ನೆನೆದು ।
ಬಂದದ್ದು ಸಾರ್ಥಕ ಮಾಡದೆ ಬೆರೆದು ೫

## ೬೪೫

ಭಕ್ತಿಲೇಸು ಮುಕ್ತಿಗಿಂತಲಿ ಪ

ಭಕ್ತಿಲೇಸು ಮುಕ್ತಿಗಿಂತಲಿ ।
ಭಕ್ತಜನರಾ ಪಾಲಿಸುವನಾ ।
ಭಕ್ತಿಗೊಲಿದು ಫಣಿಗಣ ಲೋಕದಿ ।
ಯುಕ್ತಬಲಿಯ ಬಾಗಿಲಲೊಳಿಹ ರಂಗಯ್ಯನಾ ।
ಸುರಪ್ರೀಯನಾ ಮುನಿಧ್ಯೇಯನಾ ೧

ಸರಸಿಭವನ ಕಠಾರದಿಂದ ಲೋಗದನಾ ।
ಅರಸೆನಿಪನಾ ತನುಭವನಾ । ಧರಿಸಿದನಾ ।
ಅರಸಿಯ ಜನಕನ ಕುಲರಿಯನಿಪನಾ ।
ಕುವರನ ಸ್ಯಂದನ ವಾಜಿಯನು ಪೊರೆದನಾ ।
ಗೆಲಿಸಿದನಾ । ಮೆರಿಸಿದನಾ ೨

ವನರುಹಸಖನ ಪೊಂದೇರ ನಡೆಸುತಿಹನಾ ।
ಅನುಜನಾ ಅರಿಗಳಾ ಹರಿಯ ನಂದನನಾ ।
ಘನವಾಲದಿಂದ ನೊಂದಿಹ ಪುರದರಸನಾ ।
ಅನುಜನಾ ಸ್ಥಿರಪದವಿತ್ತು ನುಳುಹಿದನಾ ।
ನಿಲಿಸಿದನಾ । ಕಾಯ್ದನಾ ೩

ಸಿರಿಯ ಮದನಳಿದು ಗುರುಚರಣಕೆ ಹೊಂದಿ ।
ದೊರಕಿ ನಿತ್ಯದಲಿ ಸಂತುಷ್ಟವಿರುತಾ ।
ಗುರುವರ ಮಹಿಪತಿ ಸ್ವಾಮಿಯ ಷೋಡಶ ।
ಪರಿಯಲಿ ತುಳಸಿಯ ತಂದು ಪೂಜೆ ಮಾಡುವ ।
ಪಾದ ನೋಡುವಾ । ಪಾಡುವಾ ೪

## ೬೪೬

ಭವತ್ಕರುಣೆ । ಗುರುಹಿರಿಯರ ಅನುಸರಣೆ ಪ

ಜ್ಞಾನ ಭಕುತಿ ಕಲೆ ತಾನರಹಿಸುವ ।
ಸ್ವಾನುಭವದ ಸುಖಭರಣೆ ೧

ಮಂಗಳ ಘನಸುಖ ಇಂಗಿತ ದೋರುವಾ ।
ಕಂಗಳ ಸಿರಿಸುಖ ಕರಣೆ ೨

ತಂದೆ ಮಹಿಪತಿ ನಂದನು ಸಾರಿದಾ ।
ನಂದ ಸರಸಿರುಹ ತರಣೆ ೩

## ೬೪೭

ಭಾಗವತರಿಗೇ ನಮೋ ನಮೋ ಹರಿ ।
ಯೋಗವುಳ್ಳವರಿಗೆ ನಮೋ ನಮೋ ಪ

ನಂದನದೊಳಗ ಅಳಿಕುಳಗಳು ಪುಳಕುತ ।
ನಲುವ ಪರಿಲಿ ಗುರುವಲುವಿನಲಿ ।
ಕಳವಳದಳಕವಗಳದುಳದಿಳೆಯೊಳು ।
ಹೊಳೆಯುತಲಿಹರಿಗೆ ನಮೋ ನಮೋ ೧

ಸಿರಿ ಮದಜರಿದಗಿಹರಿಯಂಕುರಮುರಿ ।
ದರಿಸಖರನು ಸರಿಯರಿದಿರುತಾ ।
ಪರಿಪರಿ ಮುಮ್ಮುಳಿ ತರುತರಿತರಿವುತ ।
ಚರಿಪರಿಗ್ವರುಷದಿ ನಮೋ ನಮೋ । ೨

ಜನವನವಿಜನ ಸುಜನ ಕುಜನರೊಳಗ ।
ಘನವನು ಸಮತಿಳಿದನು ಭವದೀ ।
ಅನುದಿನ ಮಹಿಪತಿ ನಂದನ ಪ್ರಭುವಿನ ।
ನೆನೆಯುತಲಿಹರಿಗೆ ನಮೋ ನಮೋ ೩

## ೬೪೮

ಭಾವನೆ ಬಲಿದನಕಾ ಒಣಭಕ್ತಿಯ ಮಾಡಿದರೇನು ।
ದೇವದೇವೋತ್ತಮನಾಪಾದ ಸುಮ್ಮನೆ ಸಿಲ್ಕುವದೇನು ಪ

ಸಂಜಿವನಿಲ್ಲದಲೇ ಸಾವಿರ ಗಿಡ ಮೂಲಿಕಿದ್ದೇನು ।
ರಂಜಕ ತಾನಿಡದೇ ಯಂತ್ರದಿಗುರಿವಡ್ಡಿರಲೇನು ೧

ಸೂರಿಯನುದಯಿಸದೇ ಕನ್ನಡಿ ಕಣ್ಣುಗಳಿದ್ದೇನು ।
ಗುರುರಾಯನ ಕರುಣಾ ಪಡಿಯದೆ ಮಂತ್ರ ಕಲಿತೇನು ೨

ಅನುಭವಿಸದೇ ಸುಖವಾ ಜ್ಞಾನದ ಮಾತಾಡಿದರೇನು ।
ಘನಗುರು ಮಹಿಪತಿ ಸ್ವಾಮಿಯ ನೆನಯದೆ ಜನುಮವೇನು ೩

## ೬೪೯

ಭಾವವಿಲ್ಲದ ಬಯಲ ಭಜನೆಗೆ ।
ದೇವನೆಂದಿಗು ವಲಿಯನು ।
ಈ ವಿಷಯ ಫಲದಾಸೆ ಮನದೊಳು ।
ಭಾವಿಸುತ ವೃತ ತಪಗಳ್ಯಾತಕೆ ಪ

ಮೀನು ನೀರೊಳಗಿದ್ದರೇನ್ಯೆ ।
ಧ್ಯಾನವನು ಬಕ ಮಾಡಲು ।
ಮೌನದಲಿ ಕೋಗಿಲೆಯು ಇದ್ದರ ।
ದೇನು ವನವಾಶ್ರಯಿಸಿ ಮರ್ಕಟ ೧

ಉರಗ ಪವನಾಹಾರ ಭಸ್ಮವ ।
ಖರ ವಿಲೇಪನ ಮಾಡಲು ।
ತರು ದಿಗಂಬರವಾಗಿ ಮಂಡುಕ ।
ಕೊರಳೊಳಕ್ಷರ ಜಪಿಸಲೇನದು ೨

ನಿರುತ ಮೂಷಕ ಗುಹ್ಯಲಿರಲೇ ।
ನರಿತು ಗಿಳಿ ಮಾತಾಡಲು ।
ಗುರು ಮಹಿಪತಿ ಬೋಧವಾಲಿಸಿ ।
ಹರಿಯ ಭಾವದಿ ನಂಬಿ ಸುಖಿಸಿರೋ ೩

## ೬೫೦

ಮತ್ತಾರು ತಿಳಿಯರಲ್ಲಾ ಸದ್ಭಕ್ತಿಯ ಪ

ತಂತ್ರಸಾರದಿಂದ ಪೂಜೆ ಮಂತ್ರದಿಂದ ಮಾಡಿ ಡಂಭ ।
ಯಂತ್ರದೊಳಗ ಸಿಲ್ಕ ಸಿಂತ್ರ ಹೋದರಲ್ಲದೇ ೧

ಶಾಸ್ತ್ರವನೋದಿ ಹೇಳಿ ನಿಸ್ತರಿಸಿ ವಾದದಿಂದ ।
ದುಸ್ತರ ಹಮ್ಮಿನೊಳಗಸ್ತ ವಾದರಲ್ಲದೇ ೨

ಇದ್ದು ಉಪವಾಸದಿಂದ ಉಗ್ರತಪವ ಮಾಡಿ ।
ಸಿದ್ಧಿಗಳ ತೋರಿ ಮೆರೆದು ಬಿದ್ದು ಹೋದರಲ್ಲದೇ ೩

ಹಲವು ಕರ್ಮಗಳ ಮಾಡಿ ಫಲವ ಬೇಡಿಕೊಂಡು ತನ್ನ ।
ಫಳಿಕೆಯ ಸಂಸಾರದಿ ಕಳೆದುಕೊಂಡರಲ್ಲದೇ ೪

ಇಂದಿರೆಪತಿಯ ಮನದಿಂದ ಅರಿತು ಪೂಜಿಸುವ ।
ತಂದೆ ಮಹಿಪತಿ ಪ್ರಭು ಹೊಂದಿದವರಲ್ಲದೇ ೫

## ೬೫೧

ಮನದಲಿ ಸಕಲಾರ್ಥ । ಜಗದೊಳು ಪ

ಮನ ನೆಲೆಗೊಂಡರೆ ಮೋಕ್ಷದ ಹಾದೀ ।
ಮನ ಚಲಿಸಲು ಬಾಧೀ ೧

ಮನವೇ ತಾಹದು ನಾನಾಜನ್ಮ ।
ಮನ ಹರಿವುದು ಕರ್ಮಾ ೨

ಮನವಶವಾದರೆ ಯೋಗಿ ಮಹಂತಾ ।
ಮನಮೀರಲು ಭ್ರಾಂತ ೩

ಮನ ಉನ್ಮನವಾಗಲು ಭವ ದೂರಾ ।
ಮನದೊಳು ಸಂಸಾರಾ ೪

ಮನ ಗುರುವರ ಮಹಿಪತಿ ಪ್ರಭು ನಾಮಾ ।
ನೆನಿಯಲು ಸುಖಧಾಮಾ ೫

## ೬೫೨

ಮನವೇ ಕೊಬ್ಬ ಬ್ಯಾಡ ಉಬ್ಬ ಬ್ಯಾಡಾ ಪ

ನೆನುವಿನೊಳಿಟ್ಟು ಮಾನುಭಾವರ ಚರಣ ಕಮಲವನು
ಜನುಮ ಸಾರ್ಥಕವನು ಮಾಡು ಕಂಡ್ಯಾ ಅ.ಪ

ವಿದ್ಯೆ ವಶವಾದರೆ ನೀ ತಿದ್ದಿ ಕಲಿಸು ಆರ್ತರಿಗೆ ।
ಬುದ್ಧಿವಂತರ ಕೂಡಾ ತರ್ಕಸ್ಯಾಡ ಬೇಡಾ ನೋಡಬ್ಯಾಡಾ ।
ಉಧೃತ ಶಕ್ತಿಯ ಬಲದಿಂದ ಸಂತ ಸೇವೆ ಮಾಡು ।
ಗುದ್ದಿ ಹೆಟ್ಟಿ ಪರರ ಪೀಡಿ ಕುಡಬ್ಯಾಡಾ ಮಾಡಬ್ಯಾಡಾ ।
ಮುದ್ದಿ ಘನವಾದರ ಸತ್ಪಾತ್ರಕ ನಿವೇದಿಸು ।
ಗುದ್ದಿನೊಳಗಿಟ್ಟು ಕಣ್ಣ ಮುಚ್ಚದಿರು ನೆಚ್ಚದಿರು ।
ಮದ್ದು ತಿಂದು ನುಡಿವವನಂತ ಪರರ ದೋಷ ಗುಣಾ ।
ಬದ್ಧವಚನವ ನುಚ್ಚರಿಸದಿರು ೧

ರಾಜಮುದ್ರಿಯ ನೆವದಿ ಉದರ ತುಂಬಲಾಗಿ ನೀತಿ ಬಿಟ್ಟು ।
ಈ ಜನರನಾ ದಂಡಿಸುವದಲ್ಲಾ ಇದುಸಲ್ಲಾ ।

ಆ ಜನ ಹೊಟ್ಟೆ ಹಾಕಿ ಬರೆಗೈಯ್ಯ ಹೋಗುವಂತೆ ।
ನೀ ಜಯಿಸಿ ಬಂದದಲ್ಲಾ ಸಂದದಲ್ಲಾ ।
ತ್ಯಾಜದಿಂದ ದೊಡ್ಡವ ನೀನೆಂದು ಸೆಜ್ಜೆ ತೆನೆಯಂತೆ ।
ಸುಜನರೊಳಗ ಗರ್ವ ಹಿಡಿಯದಿರು ಪಡೆಯದಿರು ।
ವಾಜಿಯಲಿ ನವಣಿ ತೆನೆಯಂತ ಬಾಗಿ ನಡೆದರೆ।
ಶ್ರೀ ಜನಾರ್ಧನ ರಕ್ಷೀಸುಚ ಕಂಡ್ಯಾ ೨

ಜರಿದು ಕೈಯಲ್ಲಿಂದ ಸಬಕಾರ ನೀರೊಳಗ ಬಿದ್ದ ।
ತೆರದಿಂದ ತಿರುಗಿ ತಿರುಗಿ ಯಾತಿಗಳನು ।
ಭರದಿಂದ ಕಡಿಯಲಿ ಪುಣ್ಯ ಫಲ ವಶದಿಂದ।
ನರದೇಹವನು ತಾಳಿ ಬಂದಿ ನೀನು ತಿಂದಿ ನೀನು ।
ತ್ವರಿತ ಸುತಪ್ರಿಯ ಗುರು ಮಹಿಪತಿ ಚರಣಕ ।
ಮೊರೆ ಹೊಕ್ಕು ಗತಿ ಪಡೆ ಭಾವದಿಂದ ಜೀವದಿಂದ ।
ಧರೆಯೊಳು ಗಾಳಿಯೊಳಗಿನ ದೀಪ ತೋರುವಂತೆ ।
ಸ್ಥಿರವಲ್ಲಾ ಆಗಲ್ಹೋ ಈಗಲಿದು ೩

## ೬೫೩

ಮನವೇ ನೀ ಬರಿದೆಜನ್ಮ ವ್ಯರ್ಥಗಳೆವರೆ ಬಂಗಾರದಥಾ ಪ

ಮನವೇ ನೀ ಬರಿದೇ ಜನ್ಮ ವ್ಯರ್ಥಗಳೆವರೆ ಬಂಗಾರದಂಥಾ ।
ಮರೆವ ದಿನಗಳ ಜರಿವರೇ ನರದೇಹವಿದು ಅ.ಪ

ದೊರೆಯದಿನ್ನು ಮತ್ತ ತರುವರ ಏನಾದರೇನೀ ।
ಹರಿಯ ಸ್ಮರಣೆಯ ಬಿಡುವರೇ ।
ಅರಿವ ಪಂಥ ವಿಡಿದು ಜನ್ಮ ಮರಣ ಬಲಿಯಾ ತಪ್ಪಿಸದೇ ।
ತಿಗಳಿ ಹುಳುವಿನಂತೆ ಸಿಕ್ಕ ತನ್ನ ತಾ ಮರೆವರೇ ೧

ಕೇಳೆಲೋ ನೀ ಪೊಡವಿಯೊಳಗಿದ್ದ ಸಾಯಸಾ ।
ಉದಯದಲೆದ್ದು ಬಿಡುವದೆ ಮಲಮೂತ್ರ ಕೆಲಸಾ ।

ಮಧ್ಯಾನ್ಹದಲಿ ವಡಲ ತುಂಬುವ ಕೆಲಸಾ ।
ನಿಶಿಕಾಲದಲ್ಲಿ ವಡನೆ ಮಲಗುವ ಕೆಲಸಾ ।
ಪಡೆದ ತಾಯಿಯವ್ವನೆಂಬ ದೃಢವನವಾ ಕಡಿಯಲು ।
ಕೊಡಲಿಯಂತೆ ಹುಟ್ಟಿ ಬಂದೆ ಮಡದಿ ಮಕ್ಕಳುದ್ದೇಶಾ ೨

ಮನವೇ ನೀ ಹಿಂದಿನವ ಗುಣ ಜರಿದು ಸದ್ಭಾವ ಭಕು ।
ತಿಂದ ನಡುವಳಿ ಬಿರಿದು । ಸದ್ಗುರುವಿನ ।
ದ್ವಂದ್ವ ಪಾದಗಳ ವಿಡಿದು । ಅವರ ದಯ ।
ದಿಂದ ಗತಿ ಮುಕ್ತಿ ಪಡೆದು ।
ಇಂದು ಧನ್ಯನಾಗೆಲೋ ಮುಕುಂದ ನಾಮ ನೆನೆದು ನೀ ।
ತಂದೆ ಮಹಿಪತಿ ನಿಜನಂದನುಸುರಿದನು ೩

## ೬೫೪

ಮನವೇ ಬರಿದೇ ಚಿಂತಿಸಲಿ ಬ್ಯಾಡಾ ।
ಹರಿಚರಣ ಸ್ಮರಿಸಿ ಸುಖಿಯಾಗು ಕಂಡ್ಯಾ ಪ

ಮುನ್ನ ಮಾಡಿದ ಕರ್ಮ ಜನಿತ ಲಾಭಾ ಲಾಭ ।
ವನ್ನು ಫಣಿಯಲ್ಲಿ ವಿಧಿ ವರೆದ ಪರಿಯಾ ।
ತನ್ನಿಂದ ತಾನೇ ಬಹದೆಂದು ಖರಿಯಾ ।
ಇನ್ನು ತಾ ಬಯಸಿದರೆ ಬಾರದರಿಯಾ ।
ನಿನ್ನೊಳು ನೀ ತಿಳಿದು ನಂಬು ಹರಿಯಾ ೧

ಬಸಿರೊಳಗ ಬೆಳೆಸಿ ಶಿಶುತನದಿಂದ ಯೌವನದ ।
ದೆಸೆಗೊಟ್ಟು ಸಲುಹಿದ ನಲ್ಲವೇನೋ ।
ಬಿಸಜಾಕ್ಷ ಅಸಮರ್ಥನಾದನೇನೋ ।
ಕುಶಲ ನಾನೆಂದ-ಹಂಕರಿಸಿದೇನೋ ೨

ಬೊಂಬಿಯಾನು ಆಡಿಸುವ ಸೂತ್ರಧಾರಕನಂತೆ ।
ಇಂಬಾಗಿ ಕುಣಿಸುವನು ಪ್ರಾಣಿಗಳನು ।

ಡಿಂಬಿನೊಳು ನಿಂತು ತಾ ಚೇತಿಸುವನು ।
ಕುಂಭಿನಲಿ ಸ್ವತಂತ್ರನಲ್ಲ ನೀನು ।
ಅಂಬುಜನಾಭನ ಲೀಲೆಯೆಂದು ಕಾಣು ೩

ಬದಿಲಿದ್ದ ಪಾತ್ರೆಯನು ಬಾವಿಯೊಳಗದ್ದಿದ್ದರೆ ।
ಉದಕ ತುಸು ಬಹದೆಂದು ನುಡಿದು ಸೊಲ್ಲಾ ।
ನದಿಯೊಳೆದ್ದಲು ನೀರು ಹೆಚ್ಚದಲ್ಲಾ ।
ಇದನರಿಯದೆವೆ ಭ್ರಾಂತಿಯೊಳಗ ಖುಳ್ಳಾ ।
ಕುದಿದು ಸಂಸಾರದಲಿ ಸೊರಗಿದನೆಲ್ಲಾ ೪

ಗುರು ಮಹಿಪತಿಸ್ವಾಮಿ ಬೋಧಾಮೃತವ ಸವಿದು ।
ಹರಿಚರಣದಲಿ ಭಾರವಪ್ಪಿಸಿಟ್ಟು ।
ದೊರಕಿದದರಿಂದ ಸಂತುಷ್ಟಬಟ್ಟು ।
ಸ್ಥಿರಚಿತ್ತನಾಗಿ ಕಳವಳಿಕೆ ಬಿಟ್ಟು ।
ತರುಣೋಪಾಯದ ತಿಳಿಯೋ ಜ್ಞಾನಗುಟ್ಟು ೫

## ೬೫೫

ಮನವೇ ಮೈ ಮರೆಯಲಿ ಬ್ಯಾಡಾ ।
ನಿನ್ನೊಳು ಘನದೆಚ್ಚರ ಬಲಿ ದೃಢಾ ಪ

ಸ್ವಾಪದ ಕನ್ನಡಿ ಮನಿಯಾ ಹೊಕ್ಕು ಬಳಲಿದ ಪರಿಯಾ ।
ಸಿಂಹನು ಕೂಪದಿ ನೆರಳಿಗೆ ಬೀಳಲಿ ಕಾಜಿನ ।
ಸೋಪಾನವ ನೋಡಿ ಗಜವಿನ್ನಾಪದ ಬಿಟ್ಟದ ಕೇಳಲೀ ೧

ಶುಕನಲಿಕದಲಿ ಬಂದು ಬಿದ್ದಿತು ತಾನಿಂದು । ವಾನ್ನರ
ವಿಕಳದ ಆಸೆಗೆ ಗುರಿತಿಸಿ ಕೆಟ್ಟಿತು
ಅಖಳದಿ ಸಲೆಯಾಗಿ । ಈ ಪರಿ ।
ಪ್ರಕಟದಿ ವಿಷಯಕ ಮೋಹಿಸಿ ೨

ತಂದೆ ಮಹಿಪತಿ ಚರಣ ನಮಿಸಿ । ಪಡಿಯಲೋ ಕರುಣಾ ।
ಇಂದಿರೆಯರಸನಾ ನಾಮವ ಪಾಡುತ । ಅರುಹಿನ ।
ಮಂದಿರವನು ಸಾರೀ ಜನುಮಕ ।
ಬಂದ ಸಾರ್ಥಕ ಮಾಡುತಾ ೩

## ೬೫೬

ಮನಿ ಮನಿಗೆ ಗುರುಭಕ್ತರಾದವರು । ಜಗದೊಳಗೆಲ್ಲಾ ।
ಘನ ನೆಲೆ ಕಂಡವರೊಬ್ಬರಿಲ್ಲಾ ಪ

ಗುರು ಸ್ವರೂಪರಿಯದೆ । ನರಭಾವ ಮರಿಯದೆ ।
ಗುರು ಭಕ್ತಿ ಶೀಲಾ ತಾ ತಿಳಿಯದೇ ೧

ಸಂಪ್ರದಾಯಕರು ಯನಿಸಿಕೋಬೇಕು । ಯಂದು ಬಯಸೀ ।
ಕ್ಷಿಪ್ರದಿ ಮಂತ್ರವ ಕೊಂಬರು ಅರಸಿ ೨

ಸುರಸ ಮಾತಾಡಿದರ । ಗುರುಯಂದಿರುತಿಹರು ಸಾರೆ ।
ಬಿರುನುಡಿಕೇಳಲು ತೊಲಗುವರು ಬ್ಯಾರೇ ೩

ಮೊಲೆ ಬದಿಯೊಲುಣ್ಣಿ । ಮೊತ್ತಾ ಇರುವಂತೆ ನೋಡಿಸತ್ಯಾ ।
ನೆಲೆ ಭಕ್ತಿಯೆತ್ತಾ ತಾನಿವ್ವನೆತ್ತಾ ೪

ಹುರಡೆ ಡಾಂಭಿಕದಿಂದಾ । ಚರಿಸಿದರೇನು ಛಂದಾ ।
ಗುರುಮಹಿಪತಿ ಪ್ರಭು ನೆಲಿಯಲಿ ಯಂದಾ ೫

## ೬೫೭

ಮನಿ ಮನಿಗೆಲ್ಲಾ । ಸಂತರು ಲಕ್ಷ ಕೊಬ್ಬರಿಹರಲ್ಲಾ ಪ

ಹಲವು ಗಿಡದಿ ಸಂಜೀವಿನಿ ಸಸಿಯಂತೆ ।
ಕೆಲವು ವಿರಕ್ತರಲಿ ರಸಕ್ರಿಯನಂತೆ ೧

ಮೃಗತತಿಯಲಿ ಕೃಷ್ಣಮೃಗ ದೋರುವಂತೆ
ಮುಗುದೆಯರಲಿ ಪತಿವೃತೆ ನಲಿವಂತೆ ೨

ಗುರು ಮಹಿಪತಿಸುತ ಪ್ರಭು ಪದ ಕಂಡು
ವಿರಳಾಗತಲಿಹನು ಸವಿ । ಸುಖನುಂಡು ೩

## ೬೫೮

ಮನುಜದನುಜ ರಿವರೆವೆ ನೋಡಿ ।
ದನುಜನು ದೈತ್ಯರೊಳೆನ ಬ್ಯಾಡಿ ಪ

ಹರಿ ನೆನೆಯುತ ಹರಿಕಥೆಗಳ ಕೇಳುತ ।
ಹರಿ ಭಕುತಿಗೆ ಬೆರೆದವ ಮನುಜಾ ।
ನಿರುತ ಆಹಾರ ನಿದ್ರೆ ಚರಟ ಮಾತುಗಳಾಡಿ ।
ಬರಿದೆವೆ ದಿನಗಳೆವವ ದನುಜಾ ೧

ಪರರ ಸದ್ಗುಣ ವಾಲಿಸಿಕೊಳುತಲಿ । ಸಕ ।
ಲರಿಗೆ ಮನ್ನಿಸುವವನೇ ಮನುಜಾ ।
ಗರುವ ಹಿಡಿದು ತನ್ನ ಹೊಗಳುತ ಅನ್ಯರ ।
ಬರಿದೆ ನಿಂದಿಸುವವನೆ ದನುಜಾ ೨

ಅರ್ಕ್ಯಳ್ಳವರ ಶರಣ್ಹೊಕ್ಕು ಸುಗತಿ ಪಥ ।
ಸರ್ಕನೆ ತಿಳಿದವ–ನೆವೆ ಮನುಜಾ ।
ಮೂರ್ಖತನ ಹಿಡಿದು ಸಾಧು ಸಂತರಲಿಕು ।
ತರ್ಕವ ಮಾಡುವವನೆ ದನುಜಾ ೩

ಹುಟ್ಟಿದರಲಿ ಸಂತುಷ್ಟದಿ ಕವಳವ ।
ನಿಷ್ಠೆಗೆ ತಾರದವನೆ ಮನುಜಾ ।

ನಷ್ಟ ನೃಪರ ನಂಬಿ ಲಾಭಾ ಲಾಭ ಕೊಡುವ ।
ಸೃಷ್ಟೀಶನನು ಮರೆತವ ದನುಜಾ ೪

ತಂದೆ ಮಹಿಪತಿ ಭೋಧವ ಮನದಲಿ ।
ತಂದು ಹರುಷವ ಪಡುವವ ಮನುಜಾ ।
ದಂದುಗ ಚಿತ್ತದಿ ಹೇಳಿದ ಮಾತಿಗೆ ।
ಸಂದೇಹ ಬಟ್ಟವನವ ದನುಜಾ ೫

೭೫೯

ಮನುಜಾ ಹಿಡಿ ದಾರಿ ದಾರಿ ದಾರಿ ದಾರಿ ।
ಪ್ರಾಣಿ ಹಿಡಿ ದಾರಿ ದಾರಿ ದಾರಿ ದಾರಿ ಪ

ದೃಢಭಾವದಿಂದಾ । ಪಡೆದು ಸದ್ಬೋಧಾ ।
ಒಡನೆ ಸದ್ಗುರು ಪಾರಾ । ಸಾರಿ ಸಾರಿ ಸಾರಿ ಸಾರಿ ೧

ಚಾರು ಭಕುತಿಯಾ । ದಾರಿ ನಿಶ್ಚಯಾ ।
ಆರು ಅರಿಗಳ ಕೈಯ್ಯಾ । ಮೀರಿ ಮೀರಿ ಮಮೀರಿ ಮೀರಿ ೨

ತನುಧನ ಬೆರೆದು । ಋಣವೆಲ್ಲ ಮರೆದು ।
ಕ್ಷಣದೊಳೆಲ್ಲಡಗುವದು । ತೋರಿ ತೋರಿ ತೋರಿ ತೋರಿ ೩

ಸ್ವಾನಂದ ವಿರಹಿತಾ । ದಿನಗಳೆವರೆ ವ್ಯರ್ಥಾ।
ಮಾನವಜನ್ಮದಿ ಮತ್ತೆ । ಬಾರಿ ಬಾರಿ ಬಾರಿ ಬಾರಿ ೪

ತಂದೆ ಮಹೀಪತಿ । ನಂದನ ಸಾರಥಿ ।
ಹೊಂದಲು ಹೊರೆವನು ಕರುಣ ತಾ ।
ತೋರಿ ತೋರಿ ತೋರಿ ೫

## ೬೬೦

ಮರ್ಯಾದಿ ಗುಣ ವಳ್ಳದೋ ।
ಗುರುವರ್ಯರ ಸೇವೆಲಿ ಬಾಳ್ವೆನೆಂಬನಿಗೆ ಪ

ಅರಸುವಲಿದು ಅತಿ ಪ್ರೀತಿ ಮಾಡಿದರೇನು ?
ಕರಗಳ ಮುಗಿದು ನಿಂದಿರಬೇಕು ಚರನು ೧

ಹಿಂಗದೆ ಭಕುತಿಗೆ ಬೆಜ್ಜರ ವಿಡಿದರ ।
ಬಂಗಾರಕ ಸುವಾಸನೆಯು ಬಂದಂತೆ ೨

ಕುದುರೆಗೆ ಉತ್ತತ್ತಿ ತುಸು ಕೊಟ್ಟರಾರೋಗ್ಯ ।
ಅದೇ ವಿಶೇಷ ಕೊಡಲು ವಿಪರೀತವೋ ೩

ಯೋಗ್ಯವಲ್ಲದ ಅಲಂಕಾರಿಸಿಕೊಂಡರೆ ತನ್ನ ।
ಶ್ಲಾಘ್ಯವೇ ಜಗದೊಳು ಉಪಹಾಸ್ಯ ಮೂಲಾ ೪

ತರಳತನವ ಬಿಟ್ಟೆಚರದಲಿ ನಡಿಬೇಕು ।
ಗುರು ಮಹಿಪತಿಸುತ ಪ್ರಭು ನೊಲುವಂತೆ ೫

## ೬೬೧

ಮರೆಯದಿರುವರೋ ನಿನ್ನ ಸ್ಮರಣೆಯಾ ನೀನು ಪ

ಗರಿಯಾ ಚರಿಯಾ ಮರಿಯಾ ನೆರಿಯಾ ।
ಸೇರಿ ಕ್ರೂರ ಮಾರಿದಾರಿ ಜಾರಿ ದೂರಸಾರದೇ ಅ.ಪ

ಕಡಲಶಯನೆಚ್ಚರಾ ಕಳೆದು ಹೊರಿಯಲುದರಾ ।
ಬಿಡದೋಲೈಸಿ ಘನಮದರಾ ।
ಕಡಿಯಾ ಕಿಡಿಯಾ ನುಡಿಯಾ ಪಡಿಯಾ ।
ಬೇಡಿ ಕಾಡಿ ಓಡಿ ಆಡ ಬ್ಯಾಡ ಗಾಢ ಮೂಢನೇ ೧

ತರಳ ಪ್ರಾಯ ಮುಪ್ಪಿಂದೆ ತೀರಲಾಯುಷ್ಯ ಬರುದೇ ।
ಯರಗುವಾಯಮ ತಾ ನಿಲದೇ ।
ತ್ವರಿಯಾ ಧರಿಯಾ ಕುರಯಾ ಮರಿಯಾ ।
ವೈರಿ ಮೀರಿ ಹಾರಿ ತೂರಿ ಹೊರುವಂದದಿ ೨

ಮಿನಗು ಬೆಳಗ ಘನ ಮಹಿಪತಿ ಸುತ ಪ್ರಿಯನಾ ।
ಅನುಭವಿಸದಿಹುದೇನಾ ।
ಅನುವೇ ಮನವೇ ಗುಣವೇ ದನವೇ ।
ಜ್ಞಾನ ಹೀನ ಮಾನ ದೀನ ಆನನದಲೀ ೩

## ೭೭೨

ಮಾತಿನ ಸುಖವೇನೋ ಸುಖವೇನೋ ।
ರೀತಿಯನರಿಯದೆ ತಾನು ಪ

ಸಂತರ ವೇಷವ ಹಿಡಿವೀ । ಮನದಲಿ ।
ಶಾಂತಿಯ ಮನಗುಣ ಬಿಡುವೀ ೧

ಪಡಿಯದೆ ಆತ್ಮ ವಿಚಾರಾ । ದೋರುವಿ ।
ನುಡಿಯಂಗಡಿಯ ಪಸಾರಾ ೨

ಗರ್ವವ ಮುರಿಯದೆ ಇಂದು । ಹೇಳುವಿ ।
ಸರ್ವಂ ವಾಸುದೇವೆಂದು ಮ ೩

ತರಂಗವಿಲ್ಲದ ಶರಧಿಯಂತೆ ।
ಇರುವುದು ಪರಮ ಸಮಾಧಿ ೪

ತಂದೆ ಮಹಿಪತಿ ಬೋಧಾ । ಮನನಕೆ ।
ತಂದವನೇ ಸುಖಿಯಾದಾ ೫

## ೬೬೩

ಮಾನವನಾದ ಮ್ಯಾಲ ತಾನಾರೆಂದರಿಯಬೇಕು ಪ

ಅನುಭವಿಗಳ ಕಂಡೆರಗಲಿಬೇಕು ।
ತನುಮನದಲಿ ನಿಷ್ಠೆಯು ಬಂದಿರಬೇಕು ।
ತನು ಧನ ಮದದಲಿ ಹೊರತಾಗಿರಬೇಕು ।
ಉಣಲುಡುವಲಿ ಹರಿಯಚ್ಚರಬೇಕು ೧

ಎಲ್ಲಿಂದ ಧರೆಯೊಳು ಜನ್ಮಕ ಬಂದೇ ।
ಇಲ್ಲಿಂದ ಪಯಣವು ಎಲ್ಲಿಗೆ ಮುಂದೇ ।
ಎಲ್ಲ ವಿಚಾರಿಸು ಗುರು ಮುಖದಿಂದಾ ।
ಫುಲ್ಲನಾಭನೆ ಸೇರಿ ಬದುಕಬೇಕೆಂದ ೨

ತನ್ನ ತಾ ಮರೆದು ನೀ ತಿರುಗಲಿ ಬೇಡಾ ।
ಅನ್ಯರ ನಿಂದ್ಯಪಸ್ತುತಿ ಮಾಡಬೇಡಾ ।
ಚನ್ನಾಗಿ ಶಾಂತಿಯ ನೆಲೆಬಲಿ ಬೇಡಾ ।
ಕಣ್ಣಿದ್ದು ಕುರುಡ ನೀನಾಗಲಿ ಬೇಡಾ ೩

ಏನು ತೋರುವದೆಲ್ಲಾ ಹರಿಯಾಜ್ಞೆದೆಂದು ।
ನಾನೇನು ಕರ್ತನಲ್ಲಿದಕೆಂದು ।
ಅನುಭವದಲಿ ಸಮದೃಷ್ಟಿಗೆ ಬಂದು ।
ಘನ ಗುರು ಪಾದಕ ಭಾವದಿ ಹೊಂದು ೪

ಹೊತ್ತು ಹೋಗದ ಮಾತ ನಾಡಲೀ ಬೇಡಾ ।
ಮುತ್ತಿನಂಥಾ ಜನ್ಮ ದೊರಿಯದುಗಡಾ ।
ಸತ್ಯಜ್ಞಾನಾಮೃತ ನುಂಡವ ಪ್ರೌಢಾ ।
ಕರ್ತ ಮಹಿಪತಿ ಸುತ ಸುರಿದ ನೋಡಾ ೫

## ೭೭೪

ಮಾನವನೇನಣ್ಣಾ । ಅವನೀಗ ।
ತಾನುದ್ಧರಿಸಲುದೆರಿಯನು ಕಣ್ಣಾ ಪ

ಭಕುತಿಗೆ ಕಾಯವ ಕದ್ದಾ । ವಿ ।
ರಕುತಿಗೆ ಮನವನುತಿದ್ದಾ ।
ಸಕುತಲಿ ವಿಷಯ ಮೆದ್ದಾ ।
ಮುಕುತಿ ಪಥದಿಂ ಜಾರಿ ಬಿದ್ದಾ ೧

ಸಿಂತರ ಗುಣಗಳ ಕಡಿಯಾ । ಈ ।
ಭ್ರಾಂತರ ಸಂಗದಿ ಸಿಡಿಯಾ ।
ಸಂತರ ಕೇಳದೇ ನುಡಿಯಾ ।
ಅಂತರಂಗದ ಸುಖವನು ಪಡಿಯಾ ೨

ಇಂದಿರೆ ಅರಸನ ಪಾದಾ । ಅರ ।
ವಿಂದನ ಭಜನೆಯ ಸ್ವಾದಾ ।
ಮಂದನು ತಿಳಿಯದೆ ಮರೆದಾ ।
ತಂದೆ ಮಹೀಪತಿ ನಂದನ ಸಾರಿದಾ ೩

## ೭೭೫

ಮಾಡಬಾರದೇ ಸಂಗಾ । ಸಂತರ ।
ಮಾಡಬಾರದೇ ಸಂಗ ।
ಕೂಡಿ ಶ್ರವಣವ ಮಾಡಲು ಮನದೊಳು ।
ಮಾಡಿಬಹುನು ಶ್ರೀರಂಗಾ ಪ

ವೇಷ ವೈರಾಗ್ಯವ್ಯಾಕ । ದೇಶೋ ।
ದೇಶ ತಿರುಗುವದ್ಯಾಕ ।
ಕಾಸಿ ಆರಿದ ಹಾಲವು ಇದರಿಡೇ ।
ಆ ಶಿವಧ್ಯಾನವು ಬೇಕ ೧

ನಾನಾ ಸಾಧನದಿಂದಾ । ಬಾಹು ।
ದೇನೆಲೋ ಮತಿಮಂದಾ ।
ಮನಿಯೊಳಗಿನ ಗಿಡ ಸಂಜೀವನಾಗಿರೆ ।
ಕಾನನ ತಿರುಗುವದೇ ಅಂಧಾ ೨

ಲೋಹ ಪರುಷವ ಬಿಟ್ಟು । ಕಾಷ್ಟದ
ಲಾಹುದೇ ಚಿನ್ನದ ಗಂಟು ।
ಮಹಿಪತಿ ನಂದನು ಸಾರಿದ ಸ್ವಹಿತಕ ।
ಮಹಾನುಭಾವದಾ ನಿಜಗುಟ್ಟು ೩

## ೬೬೬

ಮಾಡು ಮನವೇ ಹರಿ ಚರಣದ ಭಜನೀ ಪ

ಆವನು ಭಕುತಿಗೆ ಬೆರೆದವನಿಂದು ।
ದೇವ ಸಮಾನಹ ಧರಿಯ ಮನುಜ ನೀ ೧

ವಿಷಯ ಸುಖೇಚ್ಛೆ ಬರ್ಬುರ ಧುಮಸಾರಿ ।
ವಸುಧಿಲಿ ತ್ಯಜಿಸುವೆಸುರಕುಜನೀ ೨

ಗುರು ಮಹಿಪತಿ ಪ್ರಭು ದಯದೊಲವಿಂದಾ ।
ಹಾರಿಸುವದೀ ಮಾಯಾ ಮೋಹದ ರಜನೀ ೩

## ೬೬೭

ಮಾಡು ಹರಿಪದ ಧ್ಯಾನ ಮನವೇ ಪ

ಸಕಲೇಂದ್ರಿಗಳ ಚೇಲಿಸಿ ನೋಡುತ ।
ಪ್ರಕಟದಿ ನಿನ್ನೊಳಗ್ವಾನೇ ಮನವೇ ೧

ನಾ ನನ್ನದು ಯಂದು ಮೈಯವ ಮರೆದು ।
ಸ್ವಾನಂದ ಸುಖಗಳೆದೇ ಮನವೇ ೨

ದೃಢ ಭಾವದಿ ಗುರು ಮಹಿಪತಿ ಸ್ವಾಮಿಯ ।
ವಡಲ್ಹೊಕ್ಕು ಸಾಧಿಸಿ ಜ್ಞಾನ ಮನವೇ ೩




## ೬೬೮

ಮೂರ್ಖರ ವಡಂಬಡಿಸಲಾಗವದೆಂದೆಂದು ಪ

ಮಳಲ ತಂದಿಕ್ಕಿ ಗಾಣದೊಳಗ ಸಾಯಸದಿಂದ ।
ಬಲಿದು ಎಣ್ಣೆಯ ತೆಗೆಯಲಿಬಹುದು ೧

ಗಿರಿಗಳಂದದಿ ಬಹಥೆರೆಗಳ ಕಡಿಯುತ ।
ಶರಧಿಯದಾಟಿ ಹೋಗಲು ಬಹುದು ೨

ಇಳೆಯೊಳು ತಿರುಗುತ ದೇಶ ದೇಶಗಳನು ।
ಮೊಲದಾ ಕೋಡವ ದೊರಕಿಸಬಹುದು ೩

ತೋರುವ ಮೃಗಜಲ ಹಿಡಿದು ಪ್ರಾಶನ ಮಾಡಿ ।
ನೀರಡಕಿ ಶಾಂತ ಮಾಡಿಲಿಬಹುದು ೪

ಮೊಸಳಿದಾಡಿಯೊಳಿಹ ಅಮೌಲಿಕ ರತ್ನ ತನ್ನ ।
ವಶವನೆ ಮಾಡಿಕೊಳ್ಳಲಿಬಹುದು ೫

ಮೊರೆದು ಭೋರಿಡುತಿಹ ಸರ್ಪ ಹೂವಿನ ಪರಿ ।
ಶಿರಸದಿ ಬೇಗ ಧರಿಸಲಿಬಹುದು ೬

ಗುರುಮಹಿಪತಿಸುತ ಪ್ರಭು ಗುರುತಿಲ್ಲವರಾ ।
ನೆರಳಿಗೆ ದೂರ ಕೈ ಮುಗಿವನು ೭

## ೬೬೯

ಮರೆವಾರೇನೋ ನಿನ್ನ ನೀನು ಗುರುತಾ ನೆಲೆ ಮಾಡದೆ ।
ಸಿರಿಯರಸನಸಿರಿ ಚರಣವ ಸ್ಮರಿಸದೇ ।
ನರದೇಹ ಬರಡವ ಮಾಡುವರೆ ಜಾಣಾ ಪ

ಹಲವು ಪುಣ್ಯದಿಂದಲ್ಲದೇ ಸುಲಭದಲ್ಲಿ ಜನ್ಮವು ।
ಇಳೆಯೊಳಗುದಯಿಸಿ ತಿಳಿಯದೆ ಸ್ವಹಿತದ ।
ಬಳಿಕೆಯ ನೆರೆಭವ ಬಲಿಯೊಳು ಸಿಲುಕಿ ।
ತೊಳಲುತ ನಿಶಿದಿನ ಬಳಲುವೆ ಜಾಣಾ ೧

ಅವಗತಿಯೋ ಎನಗೆ ಮುಂದಾ ।
ಆವ ಜನಮ ವಿಹುದೋ ।
ವಿವೇಕದಿಂದ ವಿಚಾರಿಸಿ ಮನದೊಳು ।
ಭಾವಿಸಿ ಗುರುವಿನ ಪಾವನ ಪಾದಾ ।
ಭಾವಭಕುತಿಯಲಿ ಸಾವಧನನಾಗದೆ ।
ಹ್ಯಾವಹೆಮ್ಮೆಲೆ ದಿನಗಳೆದೇ ಜಾಣಾ ೨

ಬದಿಯಲ್ಲಿದ್ದಾ ವಸ್ತುವನು ।
ಸದಗಾನಾದ್ಯೋ ಕಾಣದೆ ।
ಸಾಧುರ ಕೈಯಲಿ ಹಾದಿಯ ಕೇಳೆಲೋ ।
ಸಾದರದಲಿ ನಿಜ ಸಾಧನ ಬಲಿದು ।
ಭೇದಿಸು ಮಹಿಪತಿನಂದನ ಸಾರಿದಾ ।
ಗಾದಿಯನ್ನದೆ ಗತಿ ಸಾಧಿಸೋ ಜಾಣಾ ೩

## ೬೭೦

ಮೋಹ ಬೇಡಣ್ಣಾ ಸಂಸಾರದೊಳು ಪ

ಎರವಿನ ಕಂಗಳು ಎರವಿನ ಶ್ರುತಿಯೊಳು ।
ಎರವಿನ ನಾಸಿಕ ಎರವಿನ ನಾಲಿಗೆ ।

ಎರವಿನ ಕರಗಳು ಎರವಿನ ಪಾದವು ।
ಎರವಿನ ಬುಧ್ಯರವಿನ ಬದುಕು ೧

ಎರವಿನ ಹಣಗಳು ಎರವಿನ ಭೂಷಣ ।
ಎರವಿನ ವಾಹನ ಎರವಿನ ಸಿರಿಸುಖ ।
ಎರವಿನ ತರುಣಿಮದ್ಯೆರವಿನ ಸುತರು ।
ಎರವಿನ ಬಂಧು ಎರವಿನ ಬಳಗಾ ೨

ಹರಿಯೇ ಕರ್ತನು ಹರಿ ಸೂತ್ರಾತ್ಮನು ।
ಗುರುಮಹಿಪತಿ ಪ್ರಭು ಹರಿ ಪರವೆಂದು ।
ಹರಿಯನೆ ಸ್ಮರಿಸಿ ಹರಿಯನೇ ಧ್ಯಾನಿಸಿ ।
ಹರಿಯನೆ ಪೂಜಿಸಿ ಹರಿ ಪದಹೊಂದು ೩

## ೬೭೧

ಯಾಕ ಸ್ಮರಸದೀ ಮನಸಿಗೇ ಪ

ಯಾಕ ಸ್ಮರಸದೀ ಮನಸಿಗೆ ।
ಲೋಕದೊಳು ತನ್ನ ಸುಖಗೆ ।
ಮಾಕಾಂತ ನಡಿಗಳ ಮರೆಹೊಕ್ಕು । ವಿ
ವೇಕ ಸೌಖ್ಯ ಪಡಿಯದೀಗ ೧

ಉತ್ತಮ ಸಂಗವ ನೆರೆಮಾಡಿ ತನ್ನ ।
ಚಿತ್ತದ ಚಂಚಲ ನೀಡ್ಯಾಡೀ ।
ನಿತ್ಯದಿ ಗುರು ಹಿರಿಯರ ಶೇವೆಯಲಿ।
ಹೊತ್ತು ಸಾರ್ಥಕ ಕಳಿಯದು ನೋಡು ೨

ಸಣ್ಣ ದೊಡ್ಡವರಿಂದ ಭಲರೇಯಾ ಯಂದು ।
ಮನ್ನಿಸಿಕೊಳ್ಳದೇ ಅವರ ಕೈಯ್ಯಾ ।

ಕುನ್ನಿಯ ಛೀ ಸುಡು ಸುಡು ಯಂದು ।
ನಿನ್ನ ಜನ್ಮಕೆನಿಸುವದು ಬಲು ಕುಂದು ೩

ವಿಹಿತವೇ ಅಹಿತವೆಂದು ಬಗೆವದು ತನ್ನ ।
ಸ್ವಹಿತವೇ ಅಹಿತೆಂದಾಚರಿಸುವುದು ।
ಇಹಪರ ಲೋಕಕ ಸಲ್ಲದು ಆಗಿ ।
ಕುಹಕ ಬುಧ್ಧಿಯಿಂದಲೇ ಬಾಳುದು ೪

ಜನಲಜ್ಜಾ ಮನಲಜ್ಜಾ ವೆರಡಿಲ್ಲಾ ಇದ ।
ಕೇನೋ ಮುಂದಣಗತಿ ಶಿವಬಲ್ಲಾ ।
ಅನುಮಾನ ವಿಲ್ಲಿದರೊಳು ಕಂಡು ಕೇಳಿ ।
ಘನಗುರು ಮಹಿಪತಿ ಜನ ಸೊಲ್ಲಾ ೫

## ೬೭೨

ಯಾಕೆಲೋ ಮಾನವಾ ಯಚ್ಚರ ಮರೆದು ಭ್ರಮಿಸುವರೇ ।
ಲೋಕ ರಕ್ಷಕನಾ ಸ್ಮರಣೆ ಬಿಟ್ಟು ವಿಷಯ ಕೆಳಸುವರೇ ಪ

ಪೊಂಗಡ ವಿಟ್ಟಿರಲು ತುಂಬಿ ಮುಂದೆ ಇದಿರಿಟ್ಟು ।
ಮುಂದೆ ಇದಿರಿಟ್ಟು ।
ಕಂಗಳವನು ಮುಚ್ಚಿ ಪೋಗುವಂತೆ ಅದನು ಬಿಟ್ಟು ೧

ತನ್ನ ಕೊರಳಾಭರಣಲಿರಲು ಮುಗುತಿ ಸುದತಿ ತಾನು
ಮುಗುತಿ ಸುದತಿತಾನು ।
ಅನ್ಯರ ಬ್ರಾಂತಿಲಿ ಕೇಳುವಂತೆ ನೀನು ೨

ಬೊಂಬೆಯಾಟದಲ್ಲಿ ಮಕ್ಕಳು ಆಪ್ತರಾಗುವಂತೆ ।
ಆಪ್ತರಾಗುವಂತೆ ।
ನಂಬಬ್ಯಾಡೋ ಇದನು ಸಂಸಾರವೇನು ನಿತ್ಯೆ ೩

ಚಿತ್ರ ಬರೆದಿರಲು ಕನಕರಾಶಿ ಸರ್ವವನು ।
ರಾಶಿ ಸರ್ವವನು ।
ಆರ್ತುನೋಡಲು ಬಲ್ಲರಿಗದರ ಸುಖ ದುಃಖವೇನು ೪

ಗುರು ನರನೆಂದು ಬಗೆಯ ಬ್ಯಾಡಾ ಮರವ್ಹಿಂದಾ ।
ಬ್ಯಾಡಾ ಮರವ್ಹಿಂದಾ ।
ಪರವಸ್ತು ಬಂದಿದೆ ನೋಡು ಮನುಜ ವೇಷದಿಂದ ೫

ನಮ್ಮ ನಿಮ್ಮ ತೆರದಿಂದಾ ಚರಿಸುತಿಹರು ಖರೆಯಾ ।
ಚರಿಸುತಿಹರು ಖರೆಯಾ ।
ರಮ್ಯ ಅಂಗನೆ ರೂಪ ಕೊಂಡಾಡುವ ಪರೋಪರಿಯಾ ೬

ಭಾವದಿ ನಂದನಸ್ವಾಮಿ ಮಹಿಪತಿಯ ಬಲಗೊಂಡು ।
ಮಹಿಪತಿಯ ಬಲಗೊಂಡು ।
ಭಾವದಿ ತರಿಸೋ ಭಾಗ್ಯ ಆತ್ಮ ಸವಿಸುಖನುಂಡು ೭

## ೬೭೩

ಯಾತಕಿದೆಲೋ ಪ್ರಾಣಿ ಪ್ರೇಮದ ।
ರೀತಿಲ್ಲದ ಭಜನೀ ಪ

ಪ್ರೇಮವಿಲ್ಲದ ಸ್ನಾನ ಸಂಧ್ಯಾನಾ ।
ಪ್ರೇಮವಿಲ್ಲದ ಜಪವೃತ ಅನುಷ್ಠಾನಾ ೧

ಪ್ರೇಮವಿಲ್ಲದ ಶೃತಿ ಶಾಸ್ತ್ರಜ್ಞಾನಾ ।
ಪ್ರೇಮವಿಲ್ಲದ ಕವಿತ್ವದ ತ್ರಾಣಾ ೨

ಬೆರೆತರೆ ಹರಿಭಕುತಿಗೆ ಸುಪ್ರೇಮಾ ।
ಗುರುಮಹಿಪತಿ ಪ್ರಭು ವಲಿವನು ನೇಮಾ ೩

## ೬೭೪

ಯಾತರ । ಜನುಮಾ ।
ಶಿರಿನಾಥನ ವಲುಮೆಗೆ ದೂರಾದ ನರನಾ ಪ

ಉಂಡುಂಡು ವರಗುತ ಕಂಡಲ್ಲಿ ತಿರುಗುತ ।
ಭಂಡ ಮಾತುಗಳಾಡಿ ದಿನನೂಕುತಾ ।
ಮಂಡಲೇಶನ ಭಕ್ತಿ ಮಂಡಿಸಿ ಮನದೊಳು ।
ಖಂಡ ವಿಷಯದಾಶೆ ಗಂಡಲುವವನಾ ೧

ಸ್ನಾನ ಸಂಧ್ಯಾನಿಲ್ಲಾ ಧ್ಯಾನ ಮೌನಗಳಿಲ್ಲಾ ।
ಮಾನುಭಾವರ ಸೇವೆ ಯಂದಿಗಿಲ್ಲಾ
ಹೀನ ವೃತ್ತಿಲಿ ಭವ ಕಾನನವನು ಸೇರಿ ।
ಶ್ವಾನ ಸೂಕರನಂತೆ ಬಾಳುತಲಿಹನಾ ೨

ಹಿಂದಿನ ಪುಣ್ಯದೀ ಬಂದದೀ ನರದೇಹ ।
ಮುಂದ್ಯಾವ ಗತಿಯೆಂಬ ಬೆಜ್ಜರದೀ ।
ತಂದೆ ಮಹಿಪತಿ ನಂದನ ಪ್ರಭು ಗೋ ।
ವಿಂದ ಮುಕ್ಕುಂದೆಂಬ ನಾಮವ ನೆನಿಯದೆ ೩

## ೬೭೫

ವ್ಯರ್ಥ ನುಡಿವುದೇನು ।
ಅರ್ತು ಕೊಂಡಿರು ನೀ ಪ್ರಾಣಿ ಪ

ಮುಕ್ತಿ ಮಾರ್ಗರಿಯದೇ ಬ್ರಹ್ಮ ನಾನೆಂದು ।
ಭಕ್ತಿ ಬಿಡುದು ಕುಂದು ೧

ಕೂಲಿ ಮಾಡುತ ತಾ ಅರಸನೆಂದರ ।
ಇಳೆಯೊಳೆಲ್ಲರು ನಗರೇ ಪ್ರಾಣಿ ೨

ಈಸಲರಿಯದವ ತೆಪ್ಪ ಬಿಡಲು ।
ಘಾಸಿಯಾಗನೇ ಹೇಳು ಪ್ರಾಣಿ ೩

ಹೆಚ್ಚು ಕುಂದಿನ ಬಡಿವಾರಗಳಿಲ್ಲ ।
ಇಚ್ಛೆಯಗಳವಿಲ್ಲಾ ಪ್ರಾಣಿ ೪

ಮಹಿಪತಿ ಸ್ವಾಮಿಯ ಕಂಡಿರು ಹೀಂಗ
ಸಿಹಿಗಂಡ ಮೂಕನ್ಹಾಂಗ ಪ್ರಾಣಿ ೫

## ೬೭೬

ವ್ಯರ್ಥ ದೂರುವರೀಶನಾ ವ್ಯರ್ಥದೂರುವರೈಯ್ಯಾ
ಮರ್ತು ತಮ್ಮವಗುಣ ಮರ್ತ್ಯಲಾಭಾ ಲಾಭಾ
ಕರ್ತ ಮಾಡುವೆನೆಂದು ಪ

ಕಣ್ಣು ಕಿವಿ ನಾಲಿಗಿನ್ನು ನಾಶಿಕಕೊಟ್ಟು
ಚೆನ್ನಾಗಿ ಧ್ಯಾನಿಸು ಸನ್ನುತ ಹರಿಕಥೆ ಕೇಳು
ಯನ್ನಸ್ತುತಿ ಸುನಿರ್ಮಾಲ್ಯುನ್ನತ ತುಳಸಿ
ವಾಸನಾಘ್ರಾಣಿಸೆಂದು ಮುನ್ನೆಂದನಲ್ಲದೇ
ಆನ್ಯದೈವ ನೋಡೆಂದನೇ ಪಿಶುನರ
ಅನ್ಯಾಯವ ಕೇಳೆಂದನೇ ಉದರಕಾಗಿ
ಮಾನವ ಹೊಗಳೆಂದನೇ ಭೋಗದ
ತನ್ನಗೋಸುಗ ದ್ರವ್ಯ ಆಘ್ರಾಣಿಸೆಂದನೆ ೧

ಮಂಡಿತ ಸಿರಸದೋರ್ದಂಡ ಕರಚರಣ
ಚಂಡ ಮನಗಳಿಂದಾ ಖಂಡ ನಮಿಸಿ ಸೇವೆ
ಪುಂಡಲೀಕದ ಪರಿಗಂಡು ನೃತ್ಯಾದಿಯ
ಕೊಂಡು ಬೋಧ ಮನನ ಪಂಡುಂಡ ಮಾಡೆಂದ
ಮಂಡಿ ಬಿಗಿದರೆಂದನೇ ಜನರಿಗು
ದ್ವಂದದಿ ಹೊಡಿಯಂದನೇ ಧನಿಕರ
ಕಂಡು ಭ್ರಾಂತಿಗೆ ಬಿದ್ದು ಚಿಂತಿಸುಯಂದನೆ ೨

ನಿತ್ಯಾ ನಿತ್ಯ ವರಿತು ಸತ್ಯಜ್ಞಾನೌಷದ
ಉತ್ತಮ ರಸಾಯನ ಅತ್ತಿತ್ತಲಾಗದೇ ಕೊಂಡು
ಇತ್ತ ಭವರೋಗ ವಿಪತ್ತದ ಕಳೆಯೆಂದ
ಮತ್ತ ಮಹಿಪತಿ ಸುತ ಹೃತ್ತಾಪಹಾರಿ ಕು
ಪಥ್ಯವ ಮಾಡೆಂದನೇ ಚಂಚಲ
ಚಿತ್ತ ನೀನಾಗೆಂದನೇ ಸತ್ಸಂಗ
ನಿತ್ಯ ಮಾಡಿರೆಂದನೇ ಬರಿದೆನೀ
ಮೃತ್ಯು ದೇವತೆ ಬಾಯ ತುತ್ತಾಗುಯಂದನೆ ೩

## ೬೭೭

ವ್ಯರ್ತವಾಯಿತು ಜನುಮಾ । ಹರಿಭಕ್ತಿ ।
ಅರ್ಥಿಯ ನೆಲೆಗೊಳ್ಳದೇ ಪ

ನೊಣ ಮಧು ಬಿಂದುದಲೀ ಕುಳಿತಂತೆ ।
ವಣ ವಿಷಯದ ಸುಖಕ ।
ಹೆಣಗುತ ನಿಶಿದಿನದೀ । ತಾಪತ್ರಯ ।
ಕುಣಿಯೊಳು ಹೊರಳುತಲೀ ೧

ಅವನಿಲಿ ಸಂಸಾರದೀ ಸಂಟಘಾಳಿ ।
ರವದಿಯಾ ತೆರೆ ಶಿಲುಕೀ ।
ಹವಣಿಸಿ ವಶವಾಗದು । ವಿಧಿ ಬರ ।
ಹ್ಯಾವ ತಿಳಿಯದೆ ಮರುಗೀ ೨

ಭೋಗಿನಾ ತ್ಯಾಗಿಯಾಗಿ ಆಯುಷ್ಯ ।
ನೀಗಿ ಯಚ್ಚರವಿಲ್ಲದೇ ।
ಶ್ರೀ ಗುರುಮಹಿಪತಿ ಸುತಪ್ರಭು ।
ಭಾಗವತರ ಕೂಡದೇ ೩

## ೬೭೮

ಶರಣಾರ್ಥಿ ಶಿವಶರಣಾರ್ಥಿ ।
ಹರಿಹರ ಎಂದು ಶಿವಪದ ಕಂಡವಗೆ ಪ

ಗುರುವಿಗೆರಗೆ ನಿಜ ಗುರುತಕೆ ಬಂದಿನ್ನು ।
ಧರೆಯೊಳು ಪುಣ್ಯ ಜಂಗಮನೆ ವಾಸಿ ।
ಅರಹುಮರಹು ಮೀರಿ ಸಹಜಾವಸ್ಥಿಗೆ । ಬೆರದಿಹ ಶರಣಗೆ ೧

ಎದೆಸೆಜ್ಜೆಯೊಳಗಿಹ ಘನಲಿಂಗ ಪೂಜಿಸಿ ।
ಮುದದಿಂದ ಭಕ್ತಿಯ ಪಾವುಡದೀ ।
ಸದ್ಭಾವ ಸೂತ್ರದಿ ಆವಗುಧರಿಸಿಹ । ವಿದಿತ ಲಿಂಗಾಂಗಿಗೆ ೨

ಆಶೆಯಸುಟ್ಟು ವಿಭೂತಿಯ ಹಚ್ಚಿದ ।
ಧ್ಯಾಸದಂಡ ಕೈಲಿ ಪಿಡಿದು ।
ಲೇಸಾದ ಸುಗುಣ ರುದ್ರಾಕ್ಷಿಯ ತೊಟ್ಟು । ಭಾಸಿಪ ಸಂತಗೆ ೩

ಶಾಂತಿಯ ತೊಡರವ ಕಟ್ಟಿ ವಿವೇಕದ ।
ಮುಂತಾದ ಕಾಷಾಯ ಪೊದ್ದಿಹನಾ ।
ಸಂತತ ಗುರುಧರ್ಮ ಭಿಕ್ಷೆಯನುಂಡು ।
ವಿಶ್ರಾಂತಿಯ ಮಠ ಹಿಡಿದ ವಿರಕ್ತಗೆ ೪

ಶರಣನೆನುತಾ ಅನ್ಯರ ಶರಣರ ಮಾಡೀ ।
ಶರಣ ತಾನೆಂಬ ವೃತ್ತಿಯನುಳಿದು ।
ನಿರುತದಿ ಗುರುಮಹಿಪತಿಯಾಗಿ ನಂದನು ।
ದ್ಧರಿಸಿದ ಮೂರ್ತಿಗೆ ೫

## ೬೭೯

ಶರಣರ ಕಾಯಕವೇ ಮಾಡಿ ।
ಗುರುಧರ್ಮ ಕಾಯಕವನೆ ಮಾಡಿ ಪ

ಕಂಡೋಪಮನ್ಯಾನಂದವ ಪಡೆದಾ ೧

ಐದು ವರುಷದ ಮಗವಿಡಿದ ದೃಢಾ ೨

ಇಳೆಯೊಳು ಕರಿರಾಜ ನೆಲೆಗೊಂದು ವಿಡಿದಾ ೩

ಐವರಂಗನೆ ಭಾವದಿ ನುಡಿದಾ ೪

ಭಾರವಪ್ಪಿಸಿ ಕೊಟ್ಟಾ ಕೀರಿಟಿ ಜಡಿದಾ ೫

ಅಂದಿಗಿಂದಿಗೆ ಸಾಧುವೃಂದವು ನಡದಾ ೬

ಮಹಿಪತಿಜ ಹೇಳಿದ ವಿಹಿತಾವಿಡಿದಾ ೭

## ೬೮೦

ಶರಣೆನ್ನಿ ಸಾಧುರಿಂಗೆ ।
ಪರಿ ಮೆಚ್ಚುಪರಮ ಭಾಗವತರಿಂಗೆ ಪ

ತೀರ್ಥ ಕ್ಷೇತ್ರಂಗಳಲ್ಲಿ ಮಿಂದು ಘನ ।
ಯಾತ್ರೆಯನು ಮಾಡಿ ಬರಲಿ ।
ಧಾತ್ರಿಯಲಿ ಕೆಲವು ದಿನಕೆ ಆ ಪುಣ್ಯ ।
ವರ್ಧಿ ಬಹುದಯ್ಯ ಜನಕ ।
ಅರ್ತು ಸದ್ಭಾವದಿಂದ್ಹೋಗಿ ಸಂತರ ಕಂಡ ।
ಮಾತ್ರದಲಿ ಸರ್ವ ಸುಖ ಇದಿರಿಡುವದೆಂದು ೧

ಮೆರೆವ ಭಾಗವತದಲ್ಲಿ ಉದ್ಧವಗೆ ।
ಹರಿತಾನೆ ಬೋಧಿಸುತಲಿ ।
ನೆರೆಯೋಗ ಯಾಗ ವೃತವು ಯನ್ನಹಿಡಿ ।
ಲರಿಯದಿದು ಸಾಂಖ್ಯ ತಪವು ।
ನಿರುತೆನ್ನ ಸತ್ಸಂಗ ತೋರಿ ಕೊಡುವಂತನ್ನ ।
ಧರಿಯೊಳಗ ಸಾಧನಗಳಿಲ್ಲ ಕೇಳೆಂದಾ



ಚಲಮೂರ್ತಿ ಸಂತರುಗಳು ನೋಡಲಾ ।
ಚಲಮೂರ್ತಿ ಪ್ರತಿಮೆಯಗಳು ।
ನಲಿದವರ ಪೂಜೆಯಿಂದಾ ಪ್ರೀಯನಾಗಿ ।
ಸಲಹುವನು ಶ್ರೀ ಮುಕುಂದಾ ।
ತಿಳಿಯ ದೆಂದಿಗೆ ಅಭಾಏಕ ವರ ಮಹಿಮೆಗಳು ।
ವಲಿದು ಗುರುಮಹಿಪತಿ ಸುತಗೆಚ್ಚರಿಸಿದಾ ೩

## ೬೮೧

ಶರೀರ ಜರಿಯಬೇಡಾ । ಬೆರಿಯಬೇಡಾ ।
ಸ್ಥಿರವಿದ್ದ ಕೈಯಲಿ ಗುರು ಶರಣವ ಹೊಕ್ಕು ।
ತಾರಿಸೋ ಭವದಿಂದ ನೀ ಮರಳು ಜೀವವೇ ಪ

ಲೋಕದೊಳು ವಾರಿಜೋದ್ಭವ ನಿನ್ನ ಜನ್ಮ ಕೊಟ್ಟು ।
ನೂಕಲಾಗ ತಾಯಿ ಗರ್ಭದೊಳಾವರಿಸಿ ತಾನು ಧರಿಸಿ ।
ರೇಖೆ ರೂಪ ಲಾವಣ್ಯ ಅವಯವಂಗಳಿಂದ ।
ಸಾಕಾರವಾಗಿ ಸುಂದರೆನಿಸಿ ವರನೆನಿಸಿ ।
ಬೇಕಾದ ವಿದ್ಯವನು ಸರ್ವ ಸಂಪಾದಿಸಲು ।
ತಾ ಕಾರ್ಯವಾಗಿ ಅಭ್ಯಾಸದಿಂದಾ ಧ್ಯಾಸದಿಂದಾ ।
ವಾಕ್ಪಟುದಲಿ ಸಮರ್ಥನೆಂಬನಾಮ ಪಡೆದು ।
ಪ್ರಖ್ಯಾತವಾದೆ ಈ ಕಾಯದಿಂದ ೧

ಸ್ನಾನವನು ಮಾಡಿ ತ್ರಿಕಾಲ ಸಂಧ್ಯಾನ ವಿಧಿಯನು ।
ಮೌನ ಜಪಗಳವನು ತಪಗಳನು ।
ಸ್ವಾನುಭಾವ ಸೂರ್ಯಾಡಲಾಗಿ ನೇಮವನುಷ್ಠಾನ ಮೊದಲಾದ ।
ಧ್ಯಾನ ಧಾರಣವನು ಕಾರವನು ।
ಜ್ಞಾನ ಭಕ್ತಿ ವೈರಾಗ್ಯ ಶಮದಮ ಕರುಣನು ದಿನಮಾಳ್ಪಾ ।
ಕರ್ಮ ನೈಮಿತ್ಯವಾದಾ ನಿತ್ಯವಾದಾ ।
ತಾನು ತನ್ನ ಉದ್ಧರಿಸಿಕೊಳಲಿಕ್ಕೆ ಭಾವದಿಂದಾ ।
ಮಾನುಭಾವರ ದಯ ಪಡೆವುದರಿಂದಾ ೨

ತಾನು ಕುಣಿಯಲಾರದೆ ಅಂಕಣವು ಡೊಂಕು ಎಂದು ।
ಹೀನೋಯಿಸಿ ನುಡಿವ ನಟ ವೇಷಿಯಂತೆ ।
ನೀನು ನೀಟ ನಡಿಯದ್ಹೋಗಿ ದೇಹ ಕಶ್ಮಲವೆಂದು ।
ಜ್ಞಾನ ರಹಿತನಾಗಿ ಹಳಿವುದು ಉಚಿತ ಇದು ಪ್ರಾಚೀತ ।
ಈ ನಾಲ್ಕೆರಡು ವೈರಿಗಳ ದಂಡಿಸದೇ ಬರಿದೇ ।
ಹೀನ ವೈರಾಗ್ಯವಾ ಶಣಸಬೇಡಾ ದಣಿಸಬೇಡಾ ।
ಕಾನನದ ಹುತ್ತಮ್ಯಾಲ ಬಡಿದರೇನು ವರಗಿರುವಾ ।
ಆ ನಾಗದರ್ಪಗುಂದದು ಕಂಡಾ ೩

ಪರಿಪರಿ ಮುಮ್ಮುಳಿ ವಳಗಾಗಿ ಜೀವಿಸುವ ।
ತೆರನಂತೋಯಂದು ಚಿಂತಿಸಬಹುದು ಸುರಿಸಬಹುದು ।
ನೂರು ಭಂಡಿಗಳ ತುಂಬಿ ಬಂದರೇನು ತಾ ।
ಧರೆಯೊಳು ಸೂಲ ತಾ ಹಾವುದೊಂದೇ ಸೋವುದೊಂದೇ ।
ಬರೆದ ಬರಹವೇ ಪಣಿಯಾಲಿದ್ದಪರಿ ತಪ್ಪದೈ ।
ವರ ಕೂಡಿ ಕೊಟ್ಟಡವಿ ಮಾಡುವದೇನು ನೋಡುದೇನು ।
ತ್ವರಿತ ಮೊಸರಿನೊಳಗಿನ ಬೆಣ್ಣೆ ತೆಗೆದುಕೊಂಬ ಪರಿ ।
ಪರಗತಿ ಇದರಿಂದ ಪಡಿ ನೀನು ೪

ಸಾಕ್ಷರಾವೆಂಬ ಮೂರಕ್ಷರವ ಬರೆದು ತಾ ।
ರಾಕ್ಷಸಾವೆಂಬುದೇ ಅರ್ಥವಹುದು ಅನರ್ಥ ವಹುದು ।

ಈ ಪೋಣಿಯೊಳು ದೇಹ ಇದೇ ಪರಿ ವಳಿತು ಹೊಲ್ಲೆ ।
ಪಕ್ಷದ್ವಯಕ ಬಾಹುದು ಮಾಡಿದಾಂಗ ಕೂಡಿದಾಂಗ ।
ರಕ್ಷಿಸೆಂದು ಮಹಿಪತಿಸುತ ಜೀವನಾದಿ ವಿಶ್ವಾ ।
ಕುಕ್ಷಿಯನು ನೆನೆದು ಭವ ಹಿಂಗು ಬ್ಯಾಗ ೫

## ೬೮೨

ಶಾಂತಿಯ ಬಲಿಯಣ್ಣಾ । ಮನದಲಿ ಪ

ಕೋಪ ತಾಪದ ತಾಮಸ ಗುಣದ ಮನಿ ।
ತಾಪತ್ರಯ ಮೂಲಾನಳ ಶಮನಿ ೧

ಸ್ವಾನಂದ ವಾರಿಧಿ ಉಕ್ಕೇರುವದು
ಜ್ಞಾನ ನಿಧಾನವು ಕೈ ಸೇರುವದು ೨

ಪ್ರಪಂಚ ಪರಮಾರ್ಥದ ಹಿತಕಾರಿ ।
ಕೃಪೆಯಲಿ ಸರಿಸಮ ಬಗೆ ಮುರಾರಿ ೩

ಸಾಧು ಸಂತರು ಸಂಧಿಪ ಘನವು ।
ಸಾಧಿಸಿ ಕೊಡುವದು ತಾ ಚಿದ್ಘನವು ೪

ಗುರು ಮಹಿಪತಿ ಸಾರಿದ ಬೋಧಾ ।
ಅರಿತವಗೆಲ್ಲಿಹುದು ಭವ ಬಾಧಾ ೫

## ೬೮೩

ಸತ್ಸಂಗದ ಫಲ ಸದ್ಭಾವಿಯಾದವ ಸೇವಿಸಿಕೊಂಬುವನ್ನೆ ।
ಮತ್ಸರ ಮದದಲಿ ಯಚ್ಚರಗೊಳದಾಧಮ ಬದಿಲಿದ್ದೆ ನೈ ಪ

ಕಮಲದ ಸವಿ ಭ್ರಮರವೇ ಕೊಂಬುದು ।
ಬದಿಲಿಹ ಮಂಡೂಕಗೇನ್ನೈ ।
ಶ್ರೀಮಂತರು ಹಾಲವಕರಕೊಂಬರು । ಉಣ್ಣಿಗೆ ಫಲವೇನ್ನೈ ೧

ಶ್ರೀಗಂಧ ಗಾಳಿಗೆ ಸಕಲ ವೃಕ್ಷಾದರ ।
ಬಿದಿರು ಬೊಬ್ಬುಹಳಿಗೇನ್ನೆ ।
ಆಗಮಜ್ಞರ ವಿದ್ಯಾ ವೃತ್ತನ್ನಗಲ್ಲದೇ ಜಡಮತಿಗಳಿಗೇನ್ನೆ । ೨

ಭೂಗತ ಧನವದು ವಂಶಜಗವಲ್ಲದೇ । ಕಾದಿಹ ಫಣಿಗೇನ್ನೆ ।
ಶ್ರೀ ಗುರು ಮಹಿಪತಿ ಬೋಧದ
ನುಡಿಯಿದು ನಂದನು ಸಾರಿದನ್ನೆ ೩

## ೬೮೪

ಸತ್ಸಂಗವಿನಾ ಏನಸಾಧಿಸುವದೇನರದು ಪ

ರಾಜಸೂಯಾಶ್ವಮೇಧಾ । ಮುಖ್ಯಯಾಗಗಳಿಂದಾ ।
ತ್ಯಾಜ್ಯಾ ಲೋಕಂಗಳ ಪಡೆಯಬಹುದು ೧

ಮೆರೆವ ರಾಜಯೋಗದಿ । ಹಲವುಯೋಗಗಳಿಂದಾ ।
ಪರಿಪರಿ ಸಿದ್ಧಿಯಾ ಪಡಿಯಬಹುದು ೨

ಗುರು ಮಹಿಪತಿ ಸುತಪ್ರಭು । ಮಾರ್ಗವರಿಯದೇ
ನಿರರ್ಥಕ ಸಾಯಾಸವಾ ಬಡುವುದು ೩

## ೬೮೫

ಸತ್ಸಂಗ ವಿಡಿಯೋ ಮನುಜಾ ಪ

ಹರಿಕಥಾ ಶ್ರವಣದಿ ಮನ ಜಡಿಯೋ ।
ದುರಿತಾಂಕುರ ಕಡಿಯೋ ೧

ಘನಗುರುರಾಯನ ಕರುಣವ ಪಡಿಯೋ ।
ಅನುಭವಾಮೃತ ಕುಡಿಯೋ ೨

ಮಹಿಪತಿಸುತ ಪ್ರಭು ನಾಮವ ನುಡಿಯೋ ।
ಸ್ವಹಿತದಲೀ ನಡಿಯೋ ೩

## ೬೮೬

ಸದಾ ಹರಿಭಕುತಿಯ ಶರಣರಿಗೀವುದು ಮುಕುತಿ ಪ

ವೃತ ತಪದಾನದ ಹೊಕಬವನರಿಯದ ।
ಶೃತಿ ಸ್ಮೃತಿ ವಾಕ್ಯದ ಸುಮತಿ ೧

ಯಮನಿಯಮದ ನಿಜ ಯೋಗವನರಿಯದ ।
ಶಮದಮ ಜ್ಞಾನದ ವಿರತಿ ೨

ಗುರು ಮಹಿಪತಿ ಪ್ರಭು ನಂಬುಗೆ ಅಲ್ಲದೇ ।
ಅರಿಯರು ಸಾಧನ ಯುಗತಿ ೩

## ೬೮೭

ಸಲ್ಲಾ ಸಲ್ಲಾ ಭಕುತಿಗೆ ಸಲ್ಲಾ ಸಲ್ಲಾ ।
ಸಲ್ಲ ಸಲ್ಲನೊ ಪ್ರಾಣದೊಲ್ಲಭನೊಳು
ರತಿಯಿಲ್ಲದೆ ಡಾಂಭಿಕನು ।
ಬೆಲ್ಲದೊಳಗಿನ ಕಲ್ಲಿನಂದದಲಿಹನು ।
ಪರಿಪಾಕದಲ್ಯವ ದೂರಾಹನು । ಅವನೀಗ ಪ

ಗುರುವಿನಂಘ್ರೀಯ ಕಂಡು । ಗುರುತಕ ಬಾರದೆ ।
ಧರಿಯೊಳು ವ್ಯಭಿಚಾರಿತೆರನಂದದಿ ।
ಗುರುಭಕ್ತನೆನುಸುವ ಗುರಶೇವೆಘೋದಲುವ ।
ಗುರುನಾಮ ಜಾಗಿಸುವನು ಯಲ್ಲರೊಳು ।
ಗುರುದಯ ದೋರಿಸು । ನಿಷ್ಠಿಗೆ ।
ಹುರುಳಿಲ್ಲ ಮಾನಿಸನು ೧

ಎಲ್ಲಾ ಶಾಸ್ತ್ರವ ಕಲೆ ಬಲ್ಲವ ನಾನೆಂದು ।
ಸೊಲ್ಲು ಸೊಲ್ಲಿಗೆ ತನ್ನ ಹೊಗಳುತಲಿ ।

ಒಳ್ಳೆವರನು ಕಂಡು ಮನ್ನಿಸಿಕೊಳ್ಳದೆ ।
ನಿಲ್ಲದೇ ವಾದಿಸುವ ಅವರಾಚು ಸೊಲ್ಲಿಗೆ ।
ಸೊಲ್ಲಿಗೆ ಕುಂದಿಡುವ । ಆಚಾರ ।
ಕ್ಷುಲ್ಲಕತನದಿ ನೋಡುವಾ ಅವನಿಗೆ ೨

ಘನ ಗುರು ಮಹಿಪತಿ ಸ್ವಾಮಿಯ ಸೂತ್ರದಿ ।
ಅನುವಾದಾ ಲಾಭಾ ಲಾಭಗಳೆನ್ನುತ ।
ಜನರಿಗೆ ಹೇಳುವಾತಾ ಹಾದಿತಪ್ಪುವಾ ।
ಧನ ಮದಾಂಧರ ಮನವಾ । ಹಿಡಿವುತ ।
ತನುಪರವಶ ಮಾಡುವಾ । ಸಿದ್ಧಾಂತ ।
ಅನುಭವ ನುಡಿಮರವಾ ಅವನೀಗ ೩

## ೬೮೮

ಸಾಧಕರೊಳು ಸಿದ್ಧನು ।
ಹರಿಪಾದಕಮಲ ಕಾಣಬೇಕೆಂದು ಬಯಸುವವ ಪ

ಭಕ್ತಿಯ ಹಡಗವ ಸಾರಿ ಭವಾಂಬುಧಿ ।
ಯುಕ್ತಿಲಿ ದಾಟಿ ಮನೋರಥದಾ ।
ಮುಕ್ತಿಯ ಪಟ್ಟಣದಲ್ಲಿಹ ನಿಜಘನಾ ।
ಸಕ್ತಿಲಿ ಪಡಕೊಂಡು ಸುಖದಲಿ ಕುಳಿತಾ ೧

ಉಣಲಾಡುವಲ್ಲಿ ಸರ್ವ ಅನುಭವದಲಿ ಹರಿ ।
ನೆನೆಯದೆ ಅರ್ಪಣೆಯಾಗುವದು ।
ಜನದೊಳು ಅವರವರಂತೆ ಸೋಪಾಧಿಕ ।
ಮಣಿಯಂತೆ ತೋರುವ ಸನ್ಮತ ಯೋಗಿ ೨

ಕ್ಷೀರ ನೀರ ಭೇದ ಮಾಡುವ ಹಂಸ ವಿ ।
ಚಾರದಿ ಸಾರಾಸಾರವ ತಿಳಿದು ।

ಪ್ರಾರಬ್ಧ ಗತಿಯಲಿ ಸ್ವಾನಂದದಿಂದಿಹ ।
ಧಾರುಣಿ ಜನರನು ತಾರಿಸುವಾ ೩

ಪುಣ್ಯದ ಫಲದಾಶೆಯಾತಕ ಬಾಲಗ ।
ಹೊನ್ನ ತಾ ಗುಂಬೆಂಬ ತ್ಯರನಂದದಿ ।
ಇನ್ನು ಯಮನ ಭೀತಿ ಗುಮ್ಮನೆಂ ಬುವ ಪರಿ ।
ಚೆನ್ನಾಗಿ ತಿಳಿದಿಹ ನಿದ್ವಂದಿಯೋ ೪

ಬಲ್ಲವಿಕೆಯ ದೋರಿ ಸೊಲ್ಲಿಗೆ ಬಾರದೆ ।
ಬೆಲ್ಲಸವಿದ ಮೂಕನಂದದಲಿ ।
ಪುಲ್ಲನಾಭನು ಇರುವೆಲ್ಲರೊಳಗೆ ನೋಡಿ ।
ನಿಲ್ಲವ ಗುರು ಮಹಿಪತಿ ಪ್ರಭು ಶರಣಾ ೫

## ೬೮೯

ಸಾಧು ಆದವ ಸಾಧುರ ಬಲ್ಲನೋ ।
ಸಾಧು ವೇಷದಿ ಮೆರೆವವ ಸಲ್ಲನೋ ಪ

ಧರಿಯೊಳು ಲೋಕದಿ ಸರೀ ।
ಹೊರವಳಿ ನಡತಿಯ ತೋರಿ । ಅವ ।
ತೋರಿ ತೋರದಲಿಹನೋ ೧

ಯೋಗಿಯ ಮನಸಿನ ಯೋಗಿ ।
ಭೋಗಿಗೆ ಭೋಕ್ತನೂ ಆಗಿ । ಆವ ।
ಆಗಿ ಆಗದಲಿಹನೋ ೨

ಗುರುವರ ಮಹಿಪತಿಸ್ವಾಮಿ
ಅರಿತಾ ನಂದದ ಪ್ರೇಮಿ । ಅವ ।
ಪ್ರೇಮಿ ಪ್ರೇಮಿಗೆ ವಲಿವನೋ ೩

## ೬೯೦

ಸಾಧುರ ಪಾದ ಕೂಡು । ಸಾಯಾಸಗಳನೇ ಬಿಡು ಪ

ಸಾಧುರ ಪಾದ ಕೂಡು ಸಾಯಾಸಗಳನೇ ಬಿಡು ।
ಸಾಧಿಸುವದು ನೋಡು ಸದ್ಗತಿಯ ಸುಖಾಡು ೧

ತನುವಿಟ್ಟು ಧನವಿಟ್ಟು ಚರಣಕ ಮನಕೊಟ್ಟು ।
ಅನುವಾಗಿ ತಿಳಿಗಟ್ಟು ಮದಗರ್ವಗಳ ಬಿಟ್ಟು ೨

ನಿನ್ನಾ ನೀ ತಿಳಿಯಣ್ಣಾ ಮ್ಯಾಲ ದೋರುದ್ಯಾಕ ಬಣ್ಣಾ ।
ಇನ್ನಾರೆ ದೆರಿಕಣ್ಣಾ ಆಗದಿರು ಮಸಿಮಣ್ಣಾ ೩

ತನಗ ತಾನೇವೇ ಬಂಧು ತನಗೆ ತಾನೇ ಹಗೆಯೆಂದು ।
ವನಜಾಕ್ಷ ಹೇಳಿದುದು ಅನುಮಾನಿಲ್ಲಿದಕಿಂದು ೪

ಇನ್ನೊಂದು ಸಾಧನಿಲ್ಲಾ ಇದರಿಂದಧಿಕವಿಲ್ಲಾ ।
ಮನ್ನಿಸಿ ಕೇಳಿರೆಲ್ಲಾ ಮಹಿಪತಿಜನ ಸೊಲ್ಲಾ ೫

## ೬೯೧

ಸಾಧುರ ಸಂಗವ ಮಾಡೋ ಪ್ರಾಣಿ ।
ಸಾಧುರ ಸಂಗಾ ಮಾಡಲು ಯೋಗಾ ।
ಸಾಧಿಸಿ ಬಾಹುದು ನೋಡೋ ಪ್ರಾಣಿ ಪ

ಅತಿ ಬಳಲಿಸುವ ತಾಪತ್ರಯದೊಳಗ ।
ಮತಿಗಾಣದೆ ನೋಯ ಬ್ಯಾಡೋ ಪ್ರಾಣೀ ।
ಮತಿಯುತನಾಗಿ ಭವಖೋರೆ ದಾಟುವ ।
ಪಥವಾನರಿತು ಬ್ಯಾಗ ಕೂಡೋ ಪ್ರಾಣೀ ೧

ಕ್ಷೀರ ನೀರ ವಿಭೇದವ ಮಾಡುವ ಮುಕ್ತಾ ।
ಹಾರನ ಗುಣ ಭರಣೀ ಮಾಡೋ ಪ್ರಾಣೀ ।
ಚಾರು ವಿವೇಕದಿ ಸೇವಿಸಿ ಸಾರಾವ ।
ಸಾರಾ ತ್ಯಜಿಸಿ ನಲಿದಾಡೋ ಪ್ರಾಣಿ ೨

ವನಜದೆಲಿಯು ನೀರೊಳಿಹ ಪರಿ ಜನದಲಿ
ಮನವನು ಸಂಸಾರಲಿಡೋ ಪ್ರಾಣೀ
ತನುಧನ ಬೆರಿಯದೆ ಮಹಿಪತಿಸುತ ಪ್ರಭು
ವಿನ ಸ್ತುತಿ ಸ್ತವನವ ಪಾಡೋ ಪ್ರಾಣೀ ೩

## ೬೯೨

ಸಾಧು ಸಂಗವ ಮಾಡಿ ಪ

ಜ್ಞಾನ ಸಾಧನೆಗಳ ಏನ ಬೇಡಿದದೆಲ್ಲಾ ।
ತಾನಿದಿರಿಡುವದಿ ನೋಡಿ ೧

ಹವಣಕ ಮನ ತಂದು ನೆವನವೆಲ್ಲ ಬಿಡಿಸಿ ।
ಶ್ರವಣ ಮಾಡಿಸುವರು ಕೂಡಿಮ ೨

ತಂದೆ ಮಹಿಪತಿ ನಂದನ ಸಾರಥಿ ।
ಬಂದು ಕೂಡುವ ವಡಮೂಡಿ ೩

## ೬೯೩

ಸಾಧು ಸಂತರಾಶ್ರಯ ಮಾಡಿ ।
ಇದೇ ಮಾಡಿ ಹಿತ ನೋಡಿ ಪ

ಅವರ ವಚನಕಾಗಿ ಅಗೋಚರನಾದಾ ।
ದೇವ ಬಹನು ಒಡಮೂಡಿ ೧

ಎಡಬಲದಲಿ ರಿದ್ದಿ ಶಿದ್ಧಿ ನಿಂದಿರಲು ।
ನೋಡಲು ನುಡಿಸರು ಕೂಡೀ ೨

ಮಹಿಪತಿ ನಂದನು ಸಾರಿದ ನಿಜವಾ ।
ಇಹಪರ ಸುಖವ ಸೂರ್‍ಯಾಡಿ ೩

## ೬೯೪

ಸಾಯಸವೇ ವ್ಯರ್ಥಾ । ಆಯೋಗ್ಯಜನ ತಿದ್ದುವ ಕುರ್ತಾ ಪ

ಏನು ಹೇಳಿದರೇನು । ಮನಸಿಗೇ ತುಸು ಬಂತ ।
ಅನುದಿನ ಹಾಲವನು ಬೇವಿನ ಮರಗಳಿಗೆರೆದಂತೆ ೧

ಕರಿ ಕಲ್ಲಿನ ಮ್ಯಾಲ ಮೇಘದ ಘನಮಳೆ ಕರೆದರೆ ।
ತೊರೆದು ಕಠಿಣತನವಾ ನೆನೆಯುವೆ ಎಂದಿಗೆ ಏನಾರೆ ೨

ಕತ್ತೆಯ ಮರಿ ತೊಳೆದು ಪರಿಪರಿಶೃಂಗರಿಸಿದರಿಂದೆ ।
ಉತ್ತಮ ಕುದುರೆಯ ದಶಾಂಶಕ ಬಾಹುದೇ ೩

ಲಳಗಿಯೊಳಗ ಹಿಡಿದು ನಾಯಿ ಬಾಲವ ಹಾಕಿದ ಗುರುತ ।
ಸುಲಲಿತ ವಹುದೆಂದು ತೆಗೆದು ನೋಡಲು ಮೊದಲಂತೆ ೪

ಅರವ್ಹಲ್ಲಾ ಮರವ್ಹಲ್ಲಾ ಅರಹು ಮರಹಲಿರುತಿಹುದಲ್ಲಾ ।
ಹರಿಯೇ ರಕ್ಷಿಸಬೇಕು ನಿಜ ಮಹಿಪತಿನಂದನ ಸೊಲ್ಲಾ ೫

## ೬೯೫

ಸಾರವಲ್ಲ ಸಂಸಾರವಿದು ಪ

ತನುವಿನ ಪಾಶವು ವನಿತೆರ ಪಾಶವು ।
ಉಣಲುಡುಪಾಶಾ ಹಣಗಳ ಪಾಶವು ।

ಮನೆ ಪಶು ಪಾಶಾ ಇನಿತಿಹ ಪಾಶದ ।
ಮನುಜಗ ಸುಖವೆ ೧

ಭ್ರಾಂತಿಯ ಮಂದಿರ ಚಿಂತೆಯ ಮಡುವು ।
ಪಂಥವು ನರಕದ ಕಂತುವಿನಾಶ್ರಯ ।
ಖಂತಿಯ ನೆಲೆಭವ ಜಂತುರ ನೋಡಲು ।
ಸಿಂತರ ಬೀಳುವಂತಿನಾ ಜನುಮಾ ೨

ತಾಪತ್ರಯ ನಾನಾ ಪರಿಯಿಂದಲಿ ।
ವ್ಯಾಪಿಸಿಕೊಂಡಿಹ ದೀಪರಿ ಭವಣಿ ।
ಆ ಪರಗತಿ ನಿನಗಾಪೇಕ್ಷಾದರ ।
ನೀ ಪಡಿ ತಂದೆ ಮಹಿಪತಿ ಬೋಧಾ ೩

೬೯೬

ಸಾರವೆಂದು ನಂಬಬ್ಯಾಡವೋ ಸಂಸಾರ
ಸಾರವೆಂದು ನಂಬಬ್ಯಾಡವೋ ಪ

ಸಾರವೆಂದು ನಂಬದೇ ಸಂಸಾರ ಸುಖವೆಲ್ಲ ಅ
ಸಾರವೆಂದು ತಿಳಿದು ಕಂಸಾರಿ ಚರಣ ಸಾರಿರೋ ಅ.ಪ

ಇಂದ್ರಜಾಲ ದೊಡ್ಡವಣ ಗಂಧರ್ವ ಪುರದ ಮಾಟಾ
ಸಾಂದ್ರಜಲ ಪೂರಾ ಛಂದವಿದು ನೋಡಿರ್ಯೋ
ಕನಸಿನಲಿ ಕೆಂಯ್ಯಾ ಬೆಳೆಯ ಘನವಕಂಡು ನೆಚ್ಚಿ ತನ್ನ
ಮನಿಯೊಳಿಹ ಧಾನ್ಯವೆಲ್ಲಾ ಜಿನುಗು ಮಾಡಿದಂದದಿ ೧

ತನುವುತನ್ನನಳಿದರೆ ತನು ಸಂಬಂಧಿಗಳಾರು
ಕ್ಷಣಿಕವಾದಾ ಸತಿಸುತ ಧನದ್ರವ್ಯ ಕಾಣಿರ್ಯೋ
ಮರ್ಕಟವು ಕೀಲುದೆಗೆದು ಪುಕ್ಕಟೆವೆಸಿಕ್ಕಿದಂತೆ
ಅಕ್ಕರದ ಸುಖವೆಲ್ಲಾ ದುಃಖ ರೂಪ ಕಾಣಿರ್ಯೋ ೨

ಕುತ್ತಿನ ಮಡಹು ತಾಪತ್ರಯ ತಾರುಮನೆ
ಮೃತ್ಯುಬಾಯ ತುತ್ತುರೋಗ ಹುತ್ತಪಿದು ಕಾಣಿರ್ಯೋ
ಮರಹು ನೀಗಿ ಹರಿಯಭಕ್ತಿ ಬೆರೆದು ನಿತ್ಯರಾಗಿರೆಂದು
ಗುರು ಮಹಿಪತಿ ಭೋದಗರೆದ ವಾಕ್ಯನೋಡಿರ್ಯೋ ೩

## ೬೯೭

ಸಾವಧನಾಗಿ ಮನುಜಾ । ಕೇಳು । ನಿಜ ಸ್ಥಿತಿಯಾ ಪ

ಕೇಳು ನಿಜ ಸ್ಥಿತಿಯಾ । ಪಡೆದೇನೆಂದರೆ ಗತಿಯಾ ।
ಬೀಳದೆ ನೀ ಕವಳದಾರಿಗೆ । ನಂಬು ಗುರು ಮೂರ್ತಿಯಾ ೧

ಗಗನ ಮುರಿದು ಬೀಳಲಿ । ಸಾಗರ ಮೇರೆದಪ್ಪಲಿ ।
ಬಾಗದೇ ನೀ ಅನ್ಯದೈವಕ । ಭಾವ ದೃಢ ವಿರಲಿ ೨

ದಾಸರ ಕಂಡರೆ ರಂಗಯ್ಯಾ । ಜಂಗಮ ಕಂಡರೆ ಲಿಂಗಯ್ಯಾ ।
ವೇಷಿಯಂತೆ ತಿರುಗಬ್ಯಾಡಾ ।
ಹಿಡಿಯೋ ಒಂದೇ ನಿಷ್ಠೆಯಾ ೩

ಕಂಡ ಮಾರ್ಗ ನೋಡದೆ ।
ಕಂಡ ಮಾತನಾಡದೆ ।
ಗಂಡನೊಬ್ಬನ ಮಾಡದೆ ನಾರಿ । ಪತಿವೃತೆ ಮೆರಿವದೇ ೪

ಎಲ್ಲಿ ಒಂದೇ ನಿಷ್ಠೆಯು । ಅಲ್ಲಿ ಶ್ರೀ ಹರಿ ಕೃಪೆಯು ।
ನಿಲ್ಲದೆ ಮಹಿಪತಿ ನಂದನಸ್ವಾಮಿ ।
ಇದಿರಿಡುವನು ಸಂಗತಿಯಾ ೫

## ೬೮

ಸಿಕ್ಕಲು ನೋಡೇ ಸತ್ಸಂಗ । ಯನ ।
ಗಕ್ಕಿತು ಸ್ವಾನುಭವದಂಗ ।
ಮಿಕ್ಕಿನವಿಷಯದಿ ಹಂಗಿಲ್ಲಾ । ಒಳ ।
ವಕ್ಕಲವಾದನು ಶ್ರೀನಲ್ಲಾ ಪ

ಜ್ಞಾನಾಂಜನವನು ತಂದಿಡಲಿ । ಅ ।
ಜ್ಞಾನದ ಕಣ್ಣಿನ ಪರಿ ಬಿಡಲಿ ।
ನಾನಾ ಪರಿ ಭಾಸುವ ಕೋಶದಲೀ ।
ತಾನೇ ದೋರುವ ಜಗದೀಶಾ ೧

ಭವ ಬಂಧವ ತಿಳಿಯಲು ನೆಲೆಯಾ । ತಾ ।
ಅವನಿಲಿ ಶುಕನಳಿ ಕನ್ಯಾಯಾ ।
ವಿವರಿಸಿಯನ್ನೊಳಗೆಚ್ಚರಿಸಿತೆ । ನಾ ।
ತವಕದಿ ಚಿದ್ಘನದೊಳು ಬೆರೆತೇ ೨

ಏನೆಂದ್ಹೇಳಲಿ ಅಮ್ಮಮ್ಮಾ ।
ಯನ್ನಾನಂದದ ಸುಖ । ಸಂಭ್ರಮಾ ।
ಶ್ರೀನಿಧಿಗುರು ಮಹಿಪತಿ ಬೋಧಾ । ಸಲೆ ।
ತಾ ನಳಿಯಿತು ಕಲ್ಪನೆ ಬಾಧಾ ೩

## ೬೯

ಸುಡು ಸುಡು ಯಾತರ ಬುದ್ಧಿ ಹರಡುವ ಸಲ್ಲಾ ಪ

ಸಾಧುರ ಮಹುಮೆಯ ಕಂಡವರಂತೆ ।
ವಾದಿಸಿ ತಿರುಗುವದಲ್ಲಾ ೧

ಕಾಗೆಯು ಕಪ್ರಗೆ ರೂಪದಲ್ಲಿದ್ದರೆ ।
ಕೋಗಿಲೆವಾಗುವದಲ್ಲಾ ೨

ಬಕ ಹಂಸನ ಪರಿಯಾದರ ಕ್ಷೀರೋ ।
ದಕ ಬೇರಾಗುವದಿಲ್ಲಾ ೩

ನೌಲ ಕಂಡು ಹಕ್ಕಿಯು ಕುಣಿವಂತೆ ।
ಹೋಲಿಕಿ ಗುಣ ಬಿಡುಯಲ್ಲಾ ೪

ಮಹಿಪತಿ ನಂದನು ಸಾರಿದ ನೆಚ್ಚರ ।
ಸ್ವಹಿತವ ಪಡೆಯಚ್ಚರಾ ೫

## ೭೦೦

ಸುಮ್ಮನೆಲ್ಯದ ತಾ ನೋಡಿ । ನಮ್ಮಯ್ಯನ ಕೃಪೆ ।
ಸುಮ್ಮನೆಲ್ಲ್ಯದ ತಾ ನೋಡಿ ವಮ್ಮನಾಗದೇ ಪ

ಅಂದಿಗಿಂದಿಗೇ ಒಂದೆರಡಲ್ಲದೆ ।
ಸಂಧಿಸಿ ಬಂದಿಹ ಜನ್ಮಗಳಲ್ಲಿ ।
ಕುಂದದೆ ಪುಣ್ಯದ ವೃಂದದ ಪಡೆದಾ ।
ನಂದದ ಛಂದದಿ ನಿಂದವರಲ್ಲದೆ ೧

ಗಾಧವ ಸೂಸುವೆ ಸಾಧಕನಾಗಿ ।
ಸದರದಲಿ ಗುರು ಬೋಧದ ಲಿಂದಾ ।
ಸಾಧಿಸಿ ಸಾಧಿಸಿ ಬೇಧಿಸಿ ತನ್ನೊಳು ।
ವೇದಾಂತರಿ–ತಿಹ ಸಾಧುರಿಗಲ್ಲದೆ ೨

ಬಂದದ ನುಂಡು ಬಾರದ ಬಯಸದೆ ।
ನಿಂದಿಸಿ ಲೊಂದಿಸಿ ಕುಂದದೆ ಹಿಗ್ಗದೆ ।
ತಂದೆ ಮಹಿಪತಿ ನಂದನ ನುಡಿ ನಿಜ ।
ವೆಂದನುಭವಕೆ ತಂದವಗಲ್ಲದೇ ೩

## ೭೦೧

ಸಂತ ಚರಣಕೆ ಭಾವದಿ ಮಣಿಯೋ ।
ಅಂತ ರಂಗದಿ ಬಹಯದುಕುಲಮಣಿಯೋ ಪ

ಬಿಡದೇ ಮಾಡಲು ಅವರನುಸರಣಿಯೋ ।
ಕೊಡುವನು ನಾಮದಿ ಕನಿಭರಣಿಯೋ ೧

ವರವರದ್ವೇಳಲು ಬೋಧಕ ಹಣಿಯೋ ।
ದೊರೆವುದು ಸುಜ್ಞಾನತನದ ಖಣಿಯೋ ೨

ಗುರುಮಹಿಪತಿ ಪ್ರಭು ವಶವರ್ತಣಿಯೋ ।
ಕರುಣಿಸಿ ಪುನರಪಿ ಭವದಲ್ಲಿ ದಣಿಯೋ ೩

## ೭೦೨

ಸಂತಚರಿಯ ಗೂಢಾ । ತಿಳಿಯದು ।
ಭ್ರಾಂತರಿಗಿದು ನೋಡಾ ಪ

ವೇಷವ ಸಂತರು ದೋರುವದಿಲ್ಲಾ ।
ಆಶಾಪಾಶಕ ಶಿಲಕುವರಲ್ಲಾ ೧

ಹೊರಗಾಚರಿಯು ಲೋಕದ ಸರಿಯಾ ।
ಇರುತಿಹ ಏನೇನರಿಯದ ಪರಿಯಾ ೨

ವಿಷಯ ರೂಪವ ಬ್ರಹ್ಮ ಭಾವನೆ ಬಗೆವಾ ।
ಬಿಸಿಲು ನೀರಿನ ಪರಿ ಕೇಡಿಹ ಜಗವಾ ೩

ತೋರನು ವಾಗ್ವಿಸ್ತಾರ ಬಹಳಾ ।
ಮೀರಿನೆರಿಹಿಕೊಳ್ಳ ಡಿಂಗರ ಮೇಳಾ ೪

ದಾವ ಮಾನವರೆಂದು ಸಂತರ ತಿಳಿವಾ ।
ರವರವ ನರಕದ ಕುಂಡದಲಿಳಿವಾ ೫

ಕೋಟ್ಯಾನುಕೋಟಿಗೊಬ್ಬಿಹನು ಸಾಧು ।
ಸಾಟಿಲ್ಲವರಿಗೆ ಧರಿಯೊಳಗಿಂದು ೬

ಮಹಿಪತಿನಂದನ ಪ್ರಭುವಿನ ದಯವಿನಾ ।
ಮಹಿಮೆಯ ತಿಳಿಯದು ಹೇಳಲಿನ್ನೇನಾ ೭

## ೭೦೩

ಸಂತರ ನೆರೆಯಲಿರುವದು ಇಳೆಯೊಳು ಬಲುಪುಣ್ಯ ಪ

ಚಂದನ ಗಾಳಿಯಲನ್ಯಗಿಡ ಬೆಲೆಗಾಣುವಂತೆ ।
ಕುಂದದೆ ಪಾಮರನಾಗುವನು ಮಾನ್ಯಾ ೧

ಶ್ರವಣ ಮಾಡಲು ಹರಿಕಥೆ ನಿಜಬೋಧವನು ।
ಭವದುರಿತ ಸೇರುವದು ಅರಣ್ಯಾ ೨

ತಂದೆ ಮಹಿಪತಿಸುತ ಪ್ರಭುವಿನ ಖೂನಾ ।
ಚಂದದಲಾಗುವದೇ ತಾರ್ಕಣ್ಯಾ ೩

## ೭೦೪

ಸಂತರ ನೋಡಿರ್ರೈ ಅನಂತನ ಪಾಡಿರ್ರೈ ।
ತಂತುವಿಡಿದು ನಿಶ್ಚಿಂತದಿ ಮುಕ್ತಿಯ ।
ಪಡೆದವರಾ ನಿಂದವರಾ ಪ

ದುರಿತಘನೂಕುವ ಸಂತರ ಚರಣ ।
ದ್ವಿತಿಯೋ ಭಾಗೀರಥಿಯೋ ।
ಹರಿಪ್ರಸಾದವಕೊಂಬುವ ಸಂತರ ।
ಉದರೋ ಶ್ರೀ ಕೇದಾರೋ ।

ಸರಸಧ್ಯಾತ್ಮದ ವಿದ್ಯಮ ತುಂಬಿಹ ।
ಹೃದಯೋ ವೇದದ್ಬುಧವೋ ।
ಹರಿನಾಮಾವಳಿ ಜಪಿಸುವ ಶರಣರ ।
ಕಂಠೋ ಭೂವೈಕುಂಠೋ ಮ ೧

ಪರಗತಿಗಭಯವ ದೋರುವ ಸಂತರ ।
ಕರವೋ ಕಾಶಿಪುರವೋ ।
ಸಿರಿಸುಖಸಕಲವ ನೀಡುವ ಸುಕಳೇ ।
ವರವೋ ರಾಮೇಶ್ವರವೋ ।
ಹರಿಚರಿತಾಳಾಪಗಳ ಕೇಳುವ ।
ಕಿವಿಯೋ ಶಾಸ್ತ್ರದ ಗವಿಯೋ ।
ಪರಿಪರಿತತ್ವದ ವಚನವ ಬೀರುವ ।
ವದನೋ ಅಮೃತ ಸದನೋ ೨

ಹರಿಪದಧ್ಯಾಯಿಸಿ ನೋಡುವ ಸಂತರ ।
ನಯನೋ ಸ್ವಸುಖದಯನೋ ।
ಹರಿನಿರ್ಮಾಲ್ಯವನಾಘ್ರಾಣಿಪನಾ । ಶಿಕವೋ ಆವಂತಿಕವೋ ।
ಧರೆಯೊಳು ಮತ್ತೊಂದನ್ಯಕ ಯರಗದ ।
ಹಣಿಯೋ ಮುತ್ತಿನ ಮಣಿಯೋ ।
ಹರಿಚರಣಕ ಬಿಡದ್ದೊಂದಿದ ಸಂತರ ।
ಶಿರವೋ ಕಂಚಿಪುರವೋ ೩

ಪರರುಪಕಾರ ಬಾಳುವ ಸಂತರ । ಇರವೋ ಕಲ್ಪತರುವೋ ।
ಧರೆಯೊಳು ಮಾಡುವ ಸಂತರ ವ್ಯವಹಾ ।
ರಗಳೋ ಹರಿಶೇವೆಗಳೋ ।
ಹರುಷದಿ ಸಹಜದಲಾಡುವ ಸಂತರ ।
ನುಡಿಯೋಭವದಿಕ್ಕೆಡಿಯೋ ।
ಹರಿಪ್ರೇಮದಿ ತುಳಕ್ಯಾಡುವ ಜಲಬಿಂ ।
ದುಗಳೋ ಭಕ್ತಿಯ ಮುಗಳೋ ೪

ಸಮಭಾವನೆ ನೆಲೆಗೊಂಡಿಹ ಸಂತರ ।
ನುಡಿಯೋ ಸದ್ಗತಿಯಡಿಯೋ ।
ಭ್ರಮವಿಷಯಕ ಹಚ್ಚದೆ ಕುಂದದಲಿಹ । ಮನವೋ
ನಂದನವನವೋ ।
ಕಮಲಾಕ್ಷನು ಸಂತರ ಆಜ್ಞಾ । ಧಾರಕನೋ ನೆರೆಪಾಲಕನೋ ।
ಕ್ರಮವರುಹಿದ ಗುರುಮಹಿಪತಿ ನಂದನ ।
ಪ್ರಿಯನೋ ಕರುಣಾಲಯನೋ ೫

## ೭೦೫

ಸಂತರ ಸಹವಾಸ ಮಾಡು ಮನುಜ ನೀ ।
ಭ್ರಾಂತ ಜನರ ಸಂಗ ವೀಡ್ಯಾಡು ।
ಅಂತರಂಗದಲಿ ಸುಖವ ಸೂರ್ಯಾಡು । ಅ ।
ನಂತನ ನಾಮವ ಕೊಂಡಾಡು ಪ

ದಾವ ಗ್ರಾಮದಲ್ಲಿ ಧನ ಧಾನ್ಯ ಬನವು ।
ತೀವಿಕೊಂಡಿಹ ಸಂದಣಿ ಜನವು ।
ಆವೂರೊಳಿಲ್ಲದಿರೆ ಸಂತರನವು ।
ನೀ ವಾಸ ಮಾಡಬ್ಯಾಡ ಅರಕ್ಷಣವು ೧

ಎಲ್ಲಿ ನೋಡಲು ದಿವ್ಯ ಪಟ್ಟಣಲ್ಲಾ ।
ಚಲ್ವಗೋಪುರ ಮನುಧೊರೆರಿಲ್ಲಾ ।
ಅಲ್ಲಿ ಸಾಧುರ ನರಹಳಿದಲ್ಲಾ ।
ನಿಲ್ಲು ಕಾಲೂರಿ ಸುಖವಿಹುದೆಲ್ಲಾ ೨

ಅವರಿದ್ದುದೆ ಸ್ಥಳ ವಾರಣಾಸೀ ।
ಅಚರ ದರುಶನ ಪುಣ್ಯದ ರಾಶೀ ।
ಅವರ ನೆರೆಯಲ್ಲಿ ಸ್ವರ್ಗ ಸುಖದಾಶಿ ।
ಈ ವಾಕ್ಯ ಮಹಿಪತಿ ಜ ನಾಲಿಸಿ ೩

## ೭೦೬

ಸಂತರಾ ಕೂಡ ಬಾರದೇ ।
ಏ ಮನುಜಾ ಪ

ಸಂತರಾ ಕೂಡಲಾಗೀ । ಭ್ರಾಂತತನವು ಹೋಗಿ ।
ಅಂತರ ಸುಖದೋರದೇ ೧

ಭೃಂಗಿ ಕೀಟಕ ಕೂಡೀ । ಸಂಗದಿ ಧ್ಯಾನ ಮಾಡಿ ।
ಭೃಂಗಿ ತಾನಾಗಿ ಹಾರದೇ ೨

ಗುರು ಮಹಿಪತಿ ಪ್ರೀಯಾ । ದೊರೆವನು ನಿನ್ನಕೈಯ್ಯಾ ।
ಮರಳುತನವ ಸೇರದೇ ೩

## ೭೦೭

ಸಂತರಾ ಪದವಿಡಿಯೋ ಪ

ಸಂತರಾ ಪದವಿಡಿಯೋ ।
ಭ್ರಾಂತಿಗಳೆಲ್ಲಾ ಕಡಿಯೋ ।
ಅಂತಭಾವನೆಯಿಂದ ತಂತುವಿಡಿದು ನಿಜ ।
ಶಾಂತಿಸುಖವ ಪಡಿಯೋ ಮನುಜಾ । ಶಾಂ । ೧

ಡಾಂಭಿಕಾತನಗಳೆದು ।
ಬೆಂಬಲಗುಣವಳಿದು ।
ಹಂಬಲಿಸದೇ ಮನ ಸ್ತಂಭಪರಿಯ ಮಾಡಿ ।
ನಂಬುಗೆ ದೃಢ ತಳೆದು ಮನುಜಾ । ನಂ । ೨

ನಾನಾರೆಂಬುದು ಮರೆದೀ ।
ಜ್ಞಾನದೆಚ್ಚರ ತೊರೆದೀ ।

ಕಾನನ ಹೊಕ್ಕಂತೆ ನಾನಾ ಸಾಧನದಿಂದ ।
ಏನ ಸುಖವ ಪಡೆದೀ ಮನುಜಾ । ಏ । ೩

ಸುಲಭವೇ ಮಾನುಷ ಜನ್ಮ ।
ಮ್ಯಾಲ ಅಗ್ರಜ ಧರ್ಮಾ ।
ಚಲಿಸಲಿ ಪರಿಮತ್ತೆ ಇಳೆಯೊಳು ದೊರಕುದೇ ।
ತಿಳಿನಿಜಗತಿ ವರ್ಮಾ ಮನುಜಾ । ತಿ। ೪

ಕೋಟಿ ಮಾತಿಗೆ ವಂದೇ ।
ನೀಟ ಸುಪಥವಿದೇ ।
ಧಾಟಿಲಿ ಮಹಿಪತಿ ಸುತ ಪ್ರಿಯನೊಲುಮೆಯಿಂದ ।
ಕೋಟಿಳಗಳಿನಿಳದೇ ಮನುಜಾ । ಕೋ । ೫

## ೭೦೮

ಸಂತರೆನ ಬಹುದ್ಯೆಯ್ಯಾ ಇಂಥವರಿಗೇ ।
ಅಂತರಂಗದ ಹರಿ ಏಕಾಂತ ಭಕುತರೀಗೇ ಪ

ಸುಖಕ ಮೈಯ್ಯುವ ಮರಿಯಾ ।
ದುಃಖಗಳಿದಿಂದೇ ನೋಯ ।
ಚಕಿತನಾಗನು ಕುಮತಿ ವಿಕಳ ನುಡಿಗೆ ।
ಪ್ರಕಟ ಸೌಖ್ಯಕ ಹಿಗ್ಗ ।
ಸಕಲರೊಳು ಹರಿಯೇ ವ್ಯಾಪಕ ವರಿದು ನಿರ ।
ಹಂಕೃತಿಯನುಳ್ಳರಿಗೇ ೧

ಪರಮ ಭಾಗವತೆನಿಸಿ ।
ಪರರ ಮನಿಗಳಿಗ್ಹೋಗಿ ।
ಪಿರಿದು ವಿದ್ಯವ ತೋರಿ ಪೊರೆಯ ನೋಡಲಾ ।
ಪರಧನಕ ಕರವಿಕಲ ।
ಪರಸತಿಯರಿಗೆ ಕುರುಡ ।
ಪರರ ನಿಂದೆಗೆ ಮೂಕ ಪರವಶ್ಯಾದರಿಗೆ ೨

ವೇಷಡಂಭಕವಿಲ್ಲಾ ।
ಕ್ಲೇಶ ಕರ್ಮಗಳಿಲ್ಲಾ ।
ಈ ಸಿರಿಯ ಸುಖದ ಮನದಾಶೆಯಿಲ್ಲಾ ।
ವಾಸುದೇವನ ಪದ ।
ಧ್ಯಾಸದನುಭವದಿ ನಟ ।
ವೇಷ ಪರಿ ಸಂಸಾರ ಲೇಶ ದೋರ್ವರಿಗೆ ೩

ಹರಿಯ ನಾಮವ ನೆನೆದು ।
ಹರಿಯ ಕೀರ್ತನೆಯಲ್ಲಿ ।
ಹರುಷಗುಡಿಗಟ್ಟಿ ತನು ಮರದು ನಿಂದು ।
ಬರುವ ಪ್ರೇಮಾಂಜಲಿಯ ।
ಭರಿತಲೋಚನನಾಗಿ ।
ತರಿಸಿ ತಾರಿಸುವ ಘನಕರುಣವಂತರಿಗೆ ೪

ಇಂತು ದುರ್ಗಮವಿರಲು ।
ಸಂತರಾವು ನೀವೆಂದು ।
ಸಿಂತರವ ಹೋಗಿ ಜನ ಸಿಂತರಿಸುವಾ ।
ಭ್ರಾಂತ ಮೆಚ್ಚುವನಲ್ಲಾ ।
ಶಾತಗುರು ಮಹಿಪತಿ ಸ್ವಂತನುಜಗೆಂದಾ ೫

## ೭೦೯

ಸಂತೆಯ ನೋಡಲು ಬಂದವನಾ ।
ಭ್ರಾಂತತನವ ನೋಡಿ ಮಾನವನಾ ಪ

ಪರಿ ಪರಿ ವಾಸನೆಕಾರರು ವಿಷಯದ ।
ಸರಕಿನ ಚಟ್ಟೆಯ ರಂಗಡಿಯು ।
ದುರುಳತ ನವಗುಣ ಭೂಸಿನ ರಾಶಿಯು ।
ನೆರೆದಿಹ ಸಂದಣಿ ಜನದೊಳಗ ೧

ಇಂತಿಹ ನರದೇಹ ಪ್ಯಾಟೆಯ ಸಡಗರ ।
ಪ್ರಾಂತವ ಕಾಣದೆ ಮರುಳಾಗಿ ।
ನಿಂತಲ್ಲಿ ನಿಲ್ಲದೆ ನೋಡುತ ತಿರುಗುತ ।
ಕಂಥಿಯ ಕಳೆದನು ಹೆಗಲಿನಾ ೨

ಗುರುಮಹೀಪತಿ ಸ್ವಾಮಿಯ ಗಡಚಿನ ।
ಶರಣಿರವಳಿಹುಗದೆವೆ ಮರೆದು ।
ಧರಿಯೊಳು ಉಣಲಿಲ್ಲ ಉಡಲಿಲ್ಲ ಬಂದಿವ ।
ಬರುದೆವೆ ಮುಮ್ಮಳಿ ಘಳಿಸಿದನು ೩

## ೭೧೦

ಹಳೆಯದಾಯಿತು ಕಾಯಾ ಇನ್ನಾರೇ ।
ತಿಳಿ ಸ್ವಹಿತೋಪಾಯಾ ಪ

ಬಾಲಕನಾಗಿ ಕೆಲವು ದಿನ ಕಳೆದೀ ।
ಮೌಲ್ಯ ಯೌವ್ವನದಲಿ ಉನ್ಮತ್ತನಾದಿ ೧

ಸಡಿಲುತ ಬಂದವು ಅಂಗಮಾಟಗಳು ।
ವಡಮೂಡದು ವಿವೇಕ ಬುದ್ಧಿಗಳು ೨

ಮಂಡೂಕ ಸರ್ಪ ನೋಡದೆ ಭರದಿ ।
ಅಂಡಲುವದು ನೋಣಕದೇ ಪರಿಯಾದಿ ೩

ಏನಾದರಾಗಲಿ ಹಿಂದಿನ ಕರಣೆ ।
ಜ್ಞಾನದೆಚ್ಚರ ಹಿಡಿ ಮನದೊಳು ಪ್ರಾಣಿ ೪

ಗುರುವರ ಮಹಿಪತಿ ನಂದನ ಪ್ರಿಯನಾ ।
ಅರಿತರೆ ಬಂದದೆ ಸಾರ್ಥಕ ಖೂನಾ ೫

## ೭೧೧

ಹಾದಿಯ ಕೊಡುಹರಿ ಪರಗತಿಯಾ
ಸಾಧಿಸಿ ಬಂದೇ ಕೇಳಿ ಕೀರುತಿಯಾ ಪ

ಕ್ಷಿತಿಯೊಳು ಭರತ–ಖಂಡದ ದೇಶದ
ಪತಿತರ ತಾಂಡೆಯದ ನಾಯಕನು
ಮತಿ ಹೀನ ಕಾಮಕ್ರೋಧರಾಗಿಹ ಮುಂಡರು
ಪಥ ನಡೆಗುಡಿಸರು ಅತಿಬಲರು ೧

ಆದಿಲಿ ಅಜಮಿಳಾ ತಾಂಡ್ಯ ಹೋದ ಬಳಿಕಾ
ಹಾದಿ ಮುಗ್ಗಿತಿ ಕಡೆ ಬಹುದಿನದೀ ।
ಸಾದರಲೆನಗನಿ ಅಭಯವ ಕೊಟ್ಟರ ।
ಭೇದಿಸಿ ಜನರನು ನೆರಹುವೆನು ೨

ಏನಾರೆ ಗೋಣಿಗೆ ಭಾವದ ಲಹರೆ ಕೊಂಡು
ಮಾನು ಭಾವರ ಪ್ಯಾಟಿ ಹೋಗಿಸುವುದು
ಘನಗುರು ಮಹಿಪತಿ ನಂದನ ಸಾರಥೀ
ದೀನ ವತ್ಸಲನೆಂಬ ಬಿರುದಹುದು ೩

## ೭೧೨

ಹಿತ ನೋಡೀ ಮಾಡಿ ಸುಜನರ । ಪಥವನೆಕೂಡಿ ಪ

ಗುರುವಿಗೆ ಬಾಗಿ ಶರಣವ ಹೋಗಿ ।
ತರಳತೆ ನೀಗಿ ಅರಹುತರಾಗಿ ೧

ಭ್ರಾಂತರಕೂಡಿ ಮತಿಗಳ ಬ್ಯಾಡೀ ।
ಸಂತರೊಳಾಡಿ ಅನಂತನ ಪಾಡಿ ೨

ಸಂಧಿಸಿ ತಂದ ಸುಕೃತಗಳಿಂದ ।
ಹೊಂದುವವೆಂದೇ ನರದೇಹ ಮುಂದೆ ೩

ವಿವೇಕದಿಂದಾ ವಿಡಿರಿದೆ ಭಂದಾ ।
ಅವನಿಲಿ ಬಂದಾ ಜನುಮಕ  ಭಂದಾ ೪

ಗುರುಮಹಿಪತಿಯಾ ಚರಣದ್ವಿತಿಯಾ ।
ವರಿಸಿ ಮುಕುತಿಯಾ ಪಡೆವದು ಗತಿಯಾಜ್ಞ ೫

## ೭೧೩

ಹಿಡಿ ಮನವೇ ಸಂತರ ಸಂಗ ಪ

ಹಿಡಿಮನವೇ ಸಂತರ ಸಂಗಾ ।
ವಡನಾಹುದು ಭವ ಭಯ ಭಂಗಾ ।
ಅಡಿಗಳಗೆರಗುತ ಸಾಷ್ಟಾಂಗಾ ।
ಪಡಕೋ ಚಿತ್ಸುಖದಂಗಾ ೧

ಸಿಕ್ಕಿದು ಭಾಗವತರಣ । ಶರಣಾ ।
ಸಿಕ್ಕಲು ದಕ್ಕಿಸಿಕೋ ಕರುಣಾ ।
ಉಕ್ಕಲು ಜ್ಞಾನದಾ ನಿಜ ಸ್ಫುರಣಾ । ೨

ಗುಕ್ಕದವನೇ ತಾ ಹರಿಶರಣಾ ।
ಶರಣೆಂಬುದು ಸುಲಭವಲ್ಲಾ ।
ಹರಿಮಯ ಕಾಂಬನು ಜಗವೆಲ್ಲಾ ।
ನೆರೆ ಹಮ್ಮ ಮಾತುಗಳುಳದಿಲ್ಲಾ ।
ಸರಿ ಸ್ತುತಿ ನಿಂದೆಗೆ ಬಗಿಬಲ್ಲಾ ೩

ಎಲ್ಲರ ಮನದಂತಾನಾಗಿ ।
ನಿಲ್ಲುವ ಜನದೊಳು ನಿಜಯೋಗಿ ।
ಫುಲ್ಲನಾಭನ ಭಕುತಿಲಿ ಮುಣುಗಿ ।
ಬಲ್ಲವಿಕೆಯ ದೋರನು ಬಾಗೇ ೪

ಏನೋ ಜ್ಞಾನಿಗಳಾನಂದಾ ।
ತಾನೇ ಬಲ್ಲನು ಶ್ರೀ ಗೋವಿಂದಾ ।
ಖೂನಕ ಸಾರಿದ ನುಡಿವಂದಾ ।
ಸ್ವಾನುಭವದೀ ಮಹಿಪತಿ ಕಂದಾ ೫

## ೭೧೪

ಹಿಡಿ ಸಾಧು ಸಂತರಾ ಸಂಗೆನ್ನ ಮನವೆ ।
ಹಿಡಿ ಸಾಧು ಸಂತರ ಸಂಗಾ ।
ಪೊಡವಿಲಿ ಭವಭಯ ಬಿಡಿಸಿ ಮುಕುಂದನ ।
ಅಡಿಗಳ ತೋರಿಸಿ ಕಾವುದು ಹಿಡಿಹಿಡಿ ಪ

ಐದು ವರುಷ ಮಗನ್ಯೆದಿದ ತಪದಲಿ ।
ಸಾಧು ಸಂಗನೇ ಹೊರೆಯಿತು ।
ಸಾಧಿಸಿ ಗರ್ಭದಲಿರೆ ಸಾಧು ಸಂಗ । ಪ್ರ ।
ಲ್ಹಾದನ ಯಚ್ಚರಿಸಿತು ।
ಹಾದಿಯೊಳಗ ರಾಹುಗಳ ರಾಯಾಗಾಗಲು ।
ಸಾಧು ಸಂಗುದ್ಧರಿಸಿತು ।
ಮೇದಿನಿಪತಿ ಪರೀಕ್ಷಿತಗೇಳು ದಿನದಲ್ಲಿ ।
ಬೋಧಿಸಿ ಸದ್ಗತಿ ದೋರಿತು ಹಿಡಿಹಿಡಿ ೧

ವನಜಭವನ ಲೋಕದಲಿ ಸಾಧು ಸಂಗವು ।
ಸನಕಾದಿಕರ ಹೊರೆಯಿತು ।
ವನದಲಿ ಯದುರಾಯಗಾಗಲು ಸತ್ಸಂಗ ।
ಅನುಭವ ಸುಖ ದೊರೆಯಿತು ।
ವಿನಯದಿ ಸತ್ಸಂಗ ದೇಹೂತಿ ಮೊದಲಾದ ।
ಮುನಿಜನರುದ್ಧರಿಸಿತು ।
ರಣದಲ್ಲಿ ಅರ್ಜುನಗಾಗಲು ಸತ್ಸಂಗ ।
ಅನುಮಾನ ನೀಗಿಸಿ ಕಾಯಿತು ಹಿಡಿಹಿಡಿ ೨

ಅಂದಿಗೆಂದಿಗೆ ಸಿದ್ಧ ಸಾಧಕರೆಲ್ಲಾ ।
ನಂದನ ಸುಖ ಬಿಡಿಸಿತು ।
ಹಿಂದಿನ ಕಥೆಗಳಿರತಿರಲಿನ್ನು ಸತ್ಸಂಗ ।
ಇಂದೆನ್ನ ಧನ್ಯಗೈಸಿತು ।
ತಂದೆ ಮಹಿಪತಿ ಪಾದ ಪದುಮಸಂಗ ।
ನಂದನುದ್ಧರಿಸಿತು ।
ಯಂದೆಂದಿಗಗಲದೆ ಮುಕ್ತಿಗೆ ಹೊಣೆಯಾಗಿ ।
ಕುಂದದಾ ಸುಖಕೈಯ್ಯ ಗೊಟ್ಟಿತು ಹಿಡಿಹಿಡಿ ೩

## ೭೧೫

ಹೀಗಾಗಲಿಲ್ಲ ಸುಖವು ಸಕಲರಿಗ್ಯಾಗುವದು ಪ

ಮೃಗದ ನಾಭಿಯೊಳಗ ಕಸ್ತೂರಿಡದಕಿಂದ ।
ಉಗಮ ಪಶುನರಜೀವ್ವದಲಹುದು ೧

ಎರಡು ಕಾರಣದಿಂದ ಸಮ್ಮತವೆಲ್ಲರಿಗೆ ।
ಬರಿದೆ ಮೃಗ ಘಾತವ ನಿಲುವದು ೨

ಮಹಿಪತಿ ಸುತ ಪ್ರಭು ದಾಸರಾ ಕೀರ್ತಿ ಚಂದ್ರಾ ।
ರಾಹು ಕಗ್ಗತ್ತಲೆಯಾ ಕುಂದುವದು ೩

## ೭೧೬

ಹೀಗಿದ್ದವನೇ ತಿಳಿದವನು । ನಿಜ ।
ಯೋಗದ ಮಾರ್ಗಕ ಬೇಗ ಹೊಂದುವನು ಪ

ನೆಂಟರಿಷ್ಟರೊಳು ದಾಕ್ಷಿಣ್ಯಾ । ತನ್ನ ।
ಬಂಟ ಜನರ ಮ್ಯಾಲ ಘನ ಕಾರುಣ್ಯಾ ।
ಶುಂಠ ಶಠರೊಳು ಕಾಠಿಣ್ಯಾ । ತನ ।
ಗುಂಟಾದ ಸಾಧುಗಳೊಳು ಪ್ರೀತಿ ಬಣ್ಣಾ ೧

ಅರಸುಗಳಲಿ ನಮ್ರ ಸ್ಥಿತಿ । ಸರ್ವ ।
ವರಿತ ವಿದ್ವತ್ತರೋಳರ್ಜಿವ ವೃತ್ತಿ ।
ಅರಿಗಳೊಳಗೆ ಶೌರ್ಯ ಖ್ಯಾತಿ । ತನ್ನ ।
ಗುರುಗಳೊಳಗ ಭೆಜ್ಜರಂಜಿಕೆ ನೀತಿ ೨



ಹೆಂಗಳೆಯರೊಳು ಧೂರ್ತತನಾ । ತಾನು ।
ಹಿಂಗದೆ ಮಾಡುವ ಶ್ರವಣ ಮನನಾ ।
ತುಂಗ ಮಹಿಪತಿ ಸುತ ಪ್ರಿಯನಾ । ಮಂಗ ।
ಳಂಗುಟ ನೆನೆವನು ಬಿಡದನು ದಿನಾ ೩

## ೭೧೭

ಹೀಂಗರಿದವ ಜ್ಞಾನಿ ಪ

ಅವ್ಯಕ್ತದಲುದಿಸುದು ಪ್ರತಿಮೆಗಳು ।
ವ್ಯಕ್ತದಲಡಗುವದೀ ಸಕಲು ।
ಈ ವ್ಯವಹಾರದ ಭ್ರಮೆ ಮಾತುಗಳು ೧

ಧರೆ ನೆರೆ ಬೊಬ್ಬುಳಿ ತಾ ದಿಟವಲ್ಲಾ ।
ತೋರಿಕರಿಗಿದರೇನು ಯಲ್ಲಾ ।
ನೀರಿಗೆ ಜನ್ಮ ಮರಣವಿಲ್ಲಾ ೨

ಕಿರಣದಿ ದೋರಿತು ನದಿಗಡ ಪೂರಾ ।
ಹೊರತಾಗಿರದು ಕಿರಣಕ ದೂರಾ ।
ಕಿರಣೇ ಆಯಿತು ತಾ ಮೃಗನೀರಾ ೩

ಕದಳಿಯ ಗಿಡರೂಪದ ಪದರೆಲ್ಲಾ ।
ಬಿದರಿಸಿ ನೋಡಲು ಏನುಳಿಲಿಲ್ಲಾ ।
ಇದು ಪರಿ ಪ್ರಪಂಚದ ಸೊಲ್ಲಾ ೪

ಗುರುವರ ಮಹಿಪತಿಸ್ವಾಮಿಯ ಕಂಡು ।
ಅರ್ಥವಿಕೆ ಮಾತ್ರವನೇ ಪಡಕೊಂಡು ।
ಚರಿಸುವಾ ಅನುಭವ ನೆಲೆಗೊಂಡು ೫

## ೭೧೮

ಹುಟ್ಟಿದ್ದು ಫಲವೇನು ಮನುಜನು ।
ಮುಟ್ಟದೆ ಗುರುಪದವನು ಪ

ಬೀರಿ ವಾಗ್ಜಾಲ ಆರಿಗೆ ಸೋಲಾ ।
ಮರೆದನು ಬಹಳ ಮರೆದ ಸ್ಮರಣ ಕೀಲಾ ೧

ಪರರುಪಕಾರಾ ಬಾರದಾ ಶರೀರಾ ।
ಸಿರಿಗಂಧ ಸಾರಾ ಧರಿಸಿದರೇನು ಪೂರಾ ೨

ಹವಣಿಸಿಗಾಥಾ ಶ್ರವಣವ ಮಾಡಾ ।
ಕಿವಿಗೆಟ್ಟ ಮೂಢಾ ರವದ ಕುಂಡಲ ನೋಡಾ ೩

ತನ್ನ ತಾ ಮರೆವಾ ಅನ್ಯರಾ ಜರಿವ ।
ಮನ್ನಣೆ ತೋರುವಾ ಕನ್ನಿಯ ಪರಿಲಿರುವಾ ೪

ನಂದನ ಪ್ರಾಣಾ ತಂದೆ ಮಹಿಪತಿ ಜನಾ ।
ಹೊಂದನು ಚರಣಾ ಮಂದಗಾಣದ ಕೋಣಾ ೫

## ೭೧೯

ಹೆಮ್ಮೆಯಾ ಬಿಡು ಬಿಡು ಮನುಜಾ ಪ

ಹೆಮ್ಮೆ ಹಿಡಿದ ಬೊಮ್ಮ ದೂರ್ವಾಸಾದಿಗಳೆಲ್ಲಾ ।
ಸುಮ್ಮನೆ ತಲೆವಾಗಿ ಹೋದರೆಂಬುದ ಕೇಳಿ ಅ.ಪ

ಕಡಲೊಳು ಕುಳಿತಿಹ ಬಕದಾಲ್ಭ್ಯನೊಳು ಗರ್ವ ।
ನುಡಿಯಲಿ ತಾ ವಾಯು ವಶದಿಂದಲಿ ।
ತಡಿಯದೆ ಬಹುಮುಖ ಕಮಲಾಸನ ಕಂಡು ।
ಒಡನೆ ಲಜ್ಜಿತ ಬ್ರಹ್ಮನಾದ ನೆಂಬುದು ಕೇಳಿ ೧

ತುಚ್ಛ ಮಾಡಿದ ಇಂದ್ರನೆಂಬ ಗರ್ವದಿ ಬಂದು ।
ಮತ್ಸರಿಸಲು ಅಂಬೃಷಿಯೊಡನೆ ।
ಅಚ್ಯುತನಾಯುಧ ಬೆನ್ನಟ್ಟಿ ಬರಲಾಗ ।
ಹುಚ್ಚಿಟ್ಟು ದೂರ್ವಾಸ ಹೋದನೆಂಬುದ ಕೇಳಿ ೨

ಮೇರು ಗಿರಿಯ ಸಮವಾಗಿ ಸೂರ್ಯನ ರಥಾ ।
ದಾರಿ ಕಟ್ಟುವೆನೆಂದು ಬೆಳೆಯುತಲಿ ।
ಧೀರಗಸ್ತ್ಯನ ನುಡಿ ಕೇಳಿ ವಿಂದ್ಯಾದ್ರಿ ।
ಧಾರುಣಿಯೊಳಗೇ ನಾದನೆಂಬುದ ಕೇಳಿ ೩

ಯಕ್ಷರಾಕ್ಷಸದೇವ ದ್ವಿಜರೊಳೆಮಗಸಮ ।
ಕಕ್ಷದಿ ನಿಲುವ ರರೆನುತಾ ।
ಭಿಕ್ಷುಕ ಯೋಗಿಯನುತಾ ಶಿವನೆಣಿಸದೆ ।
ದಕ್ಷ ಮನ್ಮಥರೇನಾದರೆಂಬುದ ಕೇಳಿ ೪

ನಹುಷಾದಿ ರಾಯರು ಮೂಢ ಪಂಡಿತರೆಲ್ಲಾ ।
ಬಹುತರು ನಮ್ರವೃತ್ತಿಯ ತ್ಯಜಿಸಿ ।
ಮಹಿಪತಿಸುತ ಪ್ರಭು ವಲುಮೆಗೆ ದೂರಾಗಿ ।
ಅಹಂಕಾರ ಬಲಿಯೊಳು ಕೆಟ್ಟರೆಂಬುದ ಕೇಳಿ ೫

## ೭೨೦

ಹೊತ್ತು ವ್ಯರ್ಥಾ ಹೋಗುತಿದಕೋ ಮುತ್ತಿನಂಥಾ ಪ

ಹೋಗುತಿದೆ ಮುತ್ತಿನಂಥಾ ದಿನದೊಳು ।
ಚಿತ್ತ ಸ್ವಸ್ಥ ಮಾಡಿ ಪುರುಷೋತ್ತಮನ್ನ ನೆನೆಯಿರೋ ಅ.ಪ

ಉತ್ತುಮರ ಸಂಗಡದಲ್ಲಿ ।
ನಿತ್ಯ ಶ್ರವಣಮನನ ಮಾಡಿ ।
ಅತ್ತಲಿತ್ತಲಾಗದೆ । ಸು ।
ವೃತ್ತಿಯೊಳು ಬೆರಿಯಿರೋ ೧

ಪಗಡಿ ಪಂಚಿಯಾಡಿ ಪರರಾ ।
ಬಗಲಿ ಕಳೆದು ಕಳೆವದೇನು ।
ಯುಗುತಿ ಹೀನ ರಾಗದೆ ।
ಭಕುತಿ ಪಥ ಪಡಿಯಿರೋ ೨

ಮಂದ ಮತಿಯ ಕೊಂಡ್ಯಾಡಿ ।
ಮಂದ ಮತ್ತೆ ದೊರೆಯದಿದ್ದ ।
ಇಂದು ನಾಳೆಗೆನ್ನದೇ ಮು ।
ಕುಂದ ನಾಮವ ನೆನೆಯಿರೋ ೩

ಇಂದು ನರದೇಹದಿಂದ ।
ಬಂದು ಬರಡ ಮಾಡಬ್ಯಾಡಿ ।
ತಂದೆ ಮಹಿಪತಿ ದಯ ।
ದಿಂದ ಮುಕ್ತಿಯ ಪಡೆಯಿರೋ ೪

## ೭೨೧

ಜ್ಞಾನಕಿದೇ ನಡಿ ಕುರುಹು ।
ಶ್ರೀ ರಮಾನಾಥಾಂಘ್ರಿಯ ಕಾಣುವದರಿತು ಪ

ಕೋಪ ತಾಪವ ಬಿಡಬೇಕು ಪಶ್ಚಾ ।
ತ್ತಾಪದಿ ವೈರಾಗ್ಯ ಘನ ಬಲಿಬೇಕು ।
ಪಾಪವಿರಹಿತಾಗಬೇಕು । ಗತಿ ।
ಸೋಪಾನವಾದಾ ಶಾಂತಿಯ ಜಡಿಬೇಕು ೧

ಕರುಣ ಮೂರುತಿ ಆಗಬೇಕು ಸರ್ವ ।
ಧರೆಯು ಜನಕ ಪ್ರಿಯವಾಗಿರಬೇಕು ।
ನೆರೆ ಲೋಭವನು ಜರಿಬೇಕು ತನ್ನ ।
ತೆರನರಿ ತನ್ನವ ನೀಡಲಿಬೇಕು ೨

ದುರಿತ ಭಯವ ಬಿಡಬೇಕು । ದುಃಖ ।
ದುರ್ವಾಣಿಯಲಿ ತಾ ಬಳಲದಿರಬೇಕು ।
ಹರಿಭಕ್ತಿ ದೃಢಗೊಳ್ಳಬೇಕು ಗುರು ।
ವರ ಮಹಿಪತಿ ಬೋಧ ನಿಜವೆನಬೇಕು ೩

## ೭೨೨

ಜ್ಞಾನ ಮಾರ್ಗದ ಬೋಧ ನುಡಿಗಳು ।
ಹೀನ ಮನುಜರಿಗ್ಯಾತಕೆ ।
ಶ್ರೀನಿವಾಸನ ಪಾದ ಕಮಲಧ್ಯಾನವುಳ್ಳ ಸುಜನರಿಗಲ್ಲದೇ ಪ

ಕಾಣದವಗ ಕನ್ನಡಿ ಅದ್ಯಾತಕೆ ।
ರಾಣಿ ಯಾತಕೆ ಷಂಡಗೆ ।
ಗೋಣಿಗ್ಯಾತಕೆ ಗವಸಣಿಕೆ ಗೀ ।
ವಾಣಗಳೇಕೆ ಗೊರವಗ ೧

ಶ್ವಾನಗ್ಯಾತಕ ಇಕ್ಷುದಂಡವು ।
ಈ ನರಿಗೆ ಊರ್ಯಾತಕೆ ।
ದೀನಗ್ಯಾತಕೆ ಧರ್ಮವಾರ್ತೆಯು ।
ವಾನರಕ ಸರ ಮುತ್ತು ಯಾತಕೆ ೨

ಬುತ್ತಿಗಳ್ಳರಿಗ್ಯಾಕೆ ವ್ರತಗಳು ।
ಕತ್ತಿಗ್ಯಾತಕೆ ಕಸ್ತೂರಿ ।
ಕರ್ತ ಮಹಿಪತಿ ನಂದನುಸುರಿದ ।
ಚಿತ್ತ ಶುದ್ಧಿಯ ಪಡಿಯದವರಿಗೆ ೩

## ೭೨೩

ಸರ್ವ ವಿದ್ಯದಾಗರಾ । ಪಾರ್ವತಿ ಕುಮಾರಾ ।
ದೋರ್ವ ವಿಘ್ನ ಸಂಹಾರಾ । ಶ್ರೀಗಣ ನಾಯಕನೇ ।
ಊರ್ವಿಲಿ ನಿನ್ನ ಬಲಗೊಂಬೆ ೧

ಸರಸಿಜಾಸನ ರಾಣೀ । ಸುಭೋಜ
ತರುವಾಣಿ ಕರುಣಾ ಸಾಗರೆ ।
ಅಹಿವೇಣಿ । ಸಲಹೆನ್ನ ತಾಯೆ ।
ಶರಣು ಶರಣು ಕಲ್ಯಾಣಿ ೨

ಕ್ಷೀರ ಸಾಗರ ವಾಸಾ । ಈ ರೇಳು ಜಗದೀಶಾ ।
ಸಾರಸ ಲೋಚನ ।
ಅವಿನಾಶಾ । ಶ್ರೀ ಲಕ್ಷ್ಮೀ ವಲ್ಲಭಾ ।
ಕಾರುಣ್ಯ ನಿಧಿಯೇ ಸಲಹಯ್ಯಾ ೩

ಶ್ರೀ ರಾಘವನ ದಿವ್ಯಾ । ಅರಮನೆಯ ಮದ್ದಾನಿ ।
ಮೂರಾವ ತಾರಿ
ಸಹಕಾರೋ । ಶ್ರೀ ಹನುಮಂತಾ । ತಾರಿಸೋ ಭವದಿಂದಾ ೪

ಗಜ ಚರ್ಮ ಧಾರನೇ । ಸುಜನೋದ್ಧಾರನೇ ।
ರಜನೀಶ ಮೌಳಿ ।
ಮಹಾದೇವಾ । ಪಾರ್ವತಿ ವಲ್ಲಭಾ ।
ನಿಜ ದೋರಿ ಎನ್ನ ಸಲಹಯ್ಯಾ ೫

ಮಂದ ಮುಗ್ಧೆಯರು । ಯಂದು ದಯದಿಂದಲಿ ।
ಛಂದಾಗಿ ಸಲಹು
ನಮ್ಮಯ್ಯಾ । ತಪ್ಪ ನೋಡದೆ ।
ತಂದೆ ಗುರು ಮಹಿಪತಿ ರಾಯಾ ೬

ತಂದಿ ಸರ್ವೋತ್ತಮನಾ ನಂದ ದಾರಾಧನೆ ।
ಇಂದು ನಮ್ಮನಿಯಲಿ
ಮಾಡಿರೇ । ಕೇಳೆನ್ನ ಮಾತಾ ।
ಮುಂದಾಗಿ ನೀವು ವದಗೀರೇ ೭

ಬನ್ನಿ ಭಾವಕಿಯರು ಮುನ್ನಿನಾಗುಣಬಿಟ್ಟು । ಅನ್ಯ ಕೆಲಸಕೆ
ತೊಡಗದೇ । ನೈವೇದ್ಯಕೀಗ । ಸನ್ನೆಲ್ಲಕ್ಕಿ ಮಾಡೀರೇ ೮

ಅವನೀಲಿ ದೃಢವಾದ ವಿವೇಕ ವರಳದಿಂದ ।
ಸೇರಲಿ ಅನುಮಾನಾ
ಕಸವಾ । ಆಸನ ಬಲಿದು ।
ತವಕದಿ ನೀವು ಕುಳ್ಳಿರೆ ೯

ದೋರ್ವ ನೆಲ್ಲವಗುಣ ಸರ್ವ ವಬ್ಬುಳಿ ಮಾಡಿ ।
ಉರ್ವಿಲಿ ನೀವು ।
ಕುಟ್ಟಿರೆ । ಜ್ಞಾನ ವಿಜ್ಞಾನದಿ । ಮೆರ್ವ ವನರೆಯಾ ಧರಿಸೀಗಾ ೧೦

ಶೃತಿ ಶಾಸ್ತ್ರ ಪೌರಾಣ ಪ್ರತಿಪಾದ್ಯ ವಾದಾ ।
ಅಮೃತ ನಾಮವಾ
ನೆನವುತ । ಮರೆಯದಿ ನಿಜಸ್ಥಿತಿಯೊಳು
ನೀವು ಬೆರೆಯಿರೇ ೧೧

ಸಮಭಾವ ಯಾರಿಯಾ ಕ್ರಮಗೊಂಡು ಹಾಕುತಾ । ದಮಿಸಿ
ಅಭಿಮಾನ ಹಸಕವಾ । ಏನುಳಿಯಧ್ಹಾಂಗ ।
ಕ್ರಮ ಈಡ್ಯಾಡಿ ಕುಟ್ಟಿರೆ ೧೨

ಕುಟ್ಟಿದ ಬಳಿಕಿನ್ನು ಬಿಟ್ಟು ದೋರುವದಾ ।
ಕೆಟ್ಟ ಹೊಟ್ಟವ ಹಾರಿಸಿ ।
ಶುದ್ಧ ಅಕ್ಕಿಯ ನೆಟ್ಟನೆ ನೀವು ವಡಗೂಡೀ ೧೩

ಏ–ಕಾನ್ನವ ಮಾಡೀ ಸಾಕಾರ ವಾಗಿಹಾ ।
ಏಕೋ ದೇವಗೆ ಅರ್ಪಿಸ ।
ದಯದಿಂದ ದೇವ । ಬೇಕಾದ ಸುಖ ಕೊಡುವನು ೧೪

ತಂದೆ ಮಹೀಪತಿ ನಂದನ ಸಾರಥಿ ।
ಬಂಧು ಬಳಗವು ಯನಗಾಗಿ ।
ಸಲಹುವಾ ನಮ್ಮ ಎಂದೆಂದು ಸಿಂಹಾದ್ರೀಶನು ೧೫

## ೭೨೪

ಧೀಂಧೀಧೀಂಧೀಮ ಧೀರು ಮಜರೆ ಸಂಭ್ರಮದ ।
ಧೀಂಧೀಂಧೀಂಧಿಂ ಧೀರು ।
ಮಜರೆ ಸಂಭ್ರಮದ । ಅಂದು ಶ್ರೀಕೃಷ್ಣ ರುಕ್ಮಿಣಿಯ ಪಾಣಿ ।
ಗ್ರಹಣ । ದಿಂದ ದ್ವಾರಕೆಯು ಪುಗುವ ಸಮಯದಲಿ ಪ

ಸುರ ಗಜಕ ಮೂದಲಿಸುವಾನೆಗಳು ಪಟಹದಿಂ ।
ದಿರದೆ ಶೃಂಗರ
ಗಳಿಂದಾ ನಡಿಯೇ । ಧರಣಿಗಚ್ಚರಿ ಯಾದಾ
ಚಪಳ ವಾಜಿಗಳು ।
ಬೆರೆಬೆರೆದು ಕುಣಿವಾಟಾದಿಂದಾ ಇಡಿಯೇ । ತೆರೆಹಿಲ್ಲ ।
ಪಾಯದಳದಿಂದ ರಥಿ ಸಿಂಧು ಸೀ ।
ಗುರಿ ಪತಾಕೆಗಳ ಹೊಳೆವ ।
ರೂಪಿಯೇ । ಮೆರೆವ ತಮ್ಮಟ ಭೇರಿನಾದ ಕಪಳೆಗಳಿಂದ ।
ಹರಿಪದದಿ ಪ್ರತಿ ಶಬ್ದವು ನುಡಿಯೇ ೧

ಭಟ್ಟರು ಗಾಯಕವಂದಿ ಬಿರುದು ಕೊಂಡಾಡು ತಲಿಹ । ನಟನೆ
ದಿವ್ಯಾಂಗ–ನೆಯರಾ ಮುಂದ । ಘಟನೇ ಪುಟುವೆರಸೀ
ಋಷಿಯರು ಶ್ರೇಷ್ಠರೆಡಬಲಕ । ತೃಟಿಲೀವ ಸ್ವಸ್ತಿ ವಚನಾದಿಂದ
ನಟನುಗ್ರಶೇನ ತಾಯಿ । ತಂದಿ ದಂಪತಿಗಳ ಕುಟಿಲೀರ್ವ

ರಂದಗಣಗಳು ಹಿಂದ । ಶತಸಿ ಶಠನ ಕ್ರೂರ ಸಾಂಬ ಕೃತ
ವವರ್ಮನಾ । ಭಟಿಯ ಬಲರಾಮ ನೋಡನೀ ವೃಂದ ೨

ಹೃದಯ ಮಧ್ಯದ ಪದಕದಂತೆ ಬರಿತಿಪ ನಡುವೆ ವಧು
ವೆರೆಸಿ ರಥದ ಮ್ಯಾಲ ಹರಿಯು ।
ಇದಿರು ಗೊಂಬುವ ಸಂಭ್ರಮದ
ಪಟ್ಟಣದಲಾರು ಶುದಿ ಮೊದಲ ಬಣ್ಣಿಸುವಾ ಸಿರಿಯಾ । ವದಗಿ
ಮುಂದಕ ಹೋಗಿ ಮಂಗಳಾರುತಿಗಳನು ಸುದತಿಯರು ತಂದೆ
ತ್ತಲು ತ್ವರಿಯು । ಮುದದಿಂದ ಗೃಹ ಪ್ರವೇಶವ ಮಾಡಿದನು
ಸರ್ವಾ । ವಿದಿತ ಮಹಿಪತಿ ನಂದನಾ ಧೊರೆಯು ೩

## ೭೨೫

ಕೋಲು ಕೋಲೆನ್ನ ಕೋಲೆ ಕೋಲು ಕೋಲೆನ್ನ ಕೋಲೆ ।
ಕೋಲು ಸದ್ಗುರುವಿನಾ ಬಲಗೊಂಬೆ ಕೋಲೆ ಪ

ಶರಣು ಶರಣು ಗುರುವೇ ಶರಣರ ಸುರತರುವೆ ।
ಶರಣರ ಹೃದಯದೊಳಗಿರುವೇ ಕೋಲೆ ।
ಶರಣೆ ಹೃದಯದೊಳಗಿರುವೆ ಅನುದಿನ ।
ಕರುಣದ ಮಳೆಯಾಗರೆವುತ ಕೋಲೆ ೧

ಕರಣ ತ್ರಯದಿನಂಬಿ ಸ್ಮರಣೆಯ ಮಾಡಲು ।
ಧರಣಿಯಲಿಷ್ಟಾರ್ಥ ಕೊಡುತಿಹ ಕೋಲೆ ।
ಧರಣಿಯಲಿಷ್ಟಾರ್ಥ ಕೊಡುತಿಪ ಜನದಂತ
ಕರಣದೊಳಗೆ ಬಯಕೆ ನಿಲದಂತೆ ಕೋಲೆ ೨

ಚರಣ ಸರಸಿಜಕ ಶರಣ ಹೋಗಲು ಜನ್ಮ ।
ಮರಣದ ಭಯಕಂಜಿ ಜನರು ಕೋಲೆ ।
ಮರಣದ ಭಯಕಂಜಿ ಜನರು ಬರೆ ಕಂಡು ।
ಕರುಣಾ ಕಟಾಕ್ಷದಿ ನೋಡುವ ಕೋಲೆ ೩

ಕರದಿಂದ ಪಿಡಿದವನ ತರಣೋಪಾಯದ ಬೋಧಾ ।
ಭರದಿಂದ ಬೀರುವೆ ಮನಸಿಗೆ ಕೋಲೆ ।
ಭರದಿಂದ ಬೀರುವೆ ಮನಸಿಗೆ ಭವದೊಳು ।
ಮರಳ್ಯವ ಸಿಕ್ಕದಂತೆ ಮಾಡುವೆ ಕೋಲೆ ೪

ಜ್ಞಾನವೆಂಬಂಜನೆ ಸೂನಯನಕ ಊಡಿ ।
ಹೀನ ಅಜ್ಞಾನವ ಹರಿಸೂವ ಕೋಲೆ
ಹೀನ ಅಜ್ಞಾನವ ಹರಿಸುವೆ ಬೇಗದಿ ।
ಸ್ವಾನುಭವದ ಸುಖ ಬೀರುವೆ ಕೋಲೆ ೫

ನಾನಾ ಹಂಬಲವನ ಏನೆನುಳಿಯದ್ಹಾಂಗ ।
ತಾನಿದ್ದ ಬದಿಯಲಿ ಇಹಪರ ಕೋಲೆ ।
ತಾನಿದ್ದ ಬದಿಯಲಿ ಇಹಪರ ಸುಖಗಳ ।
ನೀನಿದಿರಿಡುತಿಹೆ ಸದಮಲ ಕೋಲೆ ೬

ಎಂಟು ಸಿದ್ಧಿಗಳು ಉಂಟಾಗಿ ಬಂದರೆ ।
ವೆಂಟಣಿಸಿ ಅದರ ಕಡೆಗೇ ಕೋಲೆ ।
ವೆಂಟಣಿಸಿ ಅದರ ಕಡೆಗೇ ನೋಡ ನಿನ್ನ ।
ಬಂಟನೆಯ ಮಹಿಮೆಯು ಜಗದೊಳು ಕೋಲೆ ೭

ನಿನ್ನ ಮಹಿಮೆಯನ್ನು ಇನ್ನು ನಾ ಪೊಗಳಲು ।
ಎನ್ನಳವಲ್ಲಾ ಜಗಕಲ್ಲಾ ಕೋಲೆ ।
ಎನ್ನಳವಲ್ಲಾ ಜಗಕಲ್ಲಾ ಸದ್ಗುರು ।
ನಿನ್ನ ಮಹಿಮೆ ಬಲ್ಲೆ ನೀನವೆ ಕೋಲೆ ೮

ಮಹಿಗೆ ನೀ ಪತಿಯಾಗಿ ವಿಹರಿಸುತಿಹೆ ದೇವಾ ।
ಸಹಕಾರನಾಗಿ ಭಕ್ತರ್ಗೆ ಕೋಲೆ ।
ಸಹಕಾರನಾಗಿ ಭಕ್ತರ್ಗೆ ಅನವರತ ।
ಅಹಿತರವಂಡಣೆ ಮಾಡುತ ಕೋಲೆ ೯

ಮುನ್ನಿನಪರಾಧವ ಇನ್ನೇನು ನೋಡದೇ ।
ಎನ್ನನುದ್ಧರಿಸು ದಯದಿಂದ ಕೋಲೆ ।
ಎನ್ನನುದ್ಧರಿಸು ದಯದಿಂದ ಮತಿಕೊಟ್ಟು ।
ನಿನ್ನ ಕೀರ್ತಿಯ ಕೊಂಡಾಡುವಂತೆ ಕೋಲೆ ೧೦

ಎಂದೆಂದು ನಿಮ್ಮ ಪದ ಹೊಂದಿದ್ದವನು ನಾನು ।
ಕುಂದ ನೋಡದೇ ಸಲಹಯ್ಯಾ ಕೋಲೆ
ಕುಂದ ನೋಡದೇ ಸಲಹಯ್ಯಾ ಮಹಿಪತಿ ।
ಕಂದನು ಮುಗ್ಧನೆಂದು ಬಿಡಬ್ಯಾಡಿ ಕೋಲೆ ೧೧

## ೭೨೬

ಶೋಭಾನವೆನ್ನಿರೆ ಶುಭಕರ ಸಾವಿತ್ರೇರು ।
ಪ್ರಭುಗುರು ಆತ್ಮಾ ಶ್ರೀರಾಮಗ ಪ

ರಾಮರಾವಣ ಕ್ರೋಧನಿಸ್ಸೀಮ ಕುಂಭಕರ್ಣಾದಿ ।
ತಾಮಸದವರಾ ಮದಮುರಿದು ।
ತಾಮಸದವರ ಮದಮುರಿದು ಹೃದಯಕ ।
ಪ್ರೇಮ ಜಯೋತ್ಸವದಿಂದ್ಯೆ ತಂದಾ ೧

ಒಡನೆ ಶಾಂತಿ ಸೀತೆಯಾ ಬಿಡಿಸಿ ತಂದನು ಸೆರೆಯಾ ।
ದೃಢವಿಭೀಷಣನ ಸ್ಥಾಪಿಸಿದನಾ ।
ದೃಢವಿಭೀಷಣನ ಸ್ಥಾಪಿಸಿ ಆಶಾಪಾಶ ।
ಕಡಲ ಮಧ್ಯ ಪೂರದೊಳು ಈಗ ೨

ವಿವೇಕ ಹರಿವಾನದಿ ಭಾವದಾರತಿಯೋಳು ।
ತೀವಿದ ಸಮ್ಯಜ್ಞಾನ ಜ್ಯೋತಿ ।
ತೀವಿದ ಸಮ್ಯಜ್ಞಾನಜ್ಯೋತಿಯಿಂದ ।
ದೇವದೇವೇಶಗ ತಿಂದೀಗ ೩

ಅರಿಗಳ ಶಿಕ್ಷಿಸು ಶರಣರ ರಕ್ಷಿಸು ।
ಧರೆಯೊಳುಯೆಂದು ಹರಸುತ ।
ಧರೆಯೊಳು ಎಂದು ಹರಸುತ ಮುತ್ತಿನ ।
ಪರಮಶಾಶಯ ನೊಸಲೊಳಿಟ್ಟು ೪

ಇಹಪರಸುಖದಾತಾ ಬಾಹ್ಯಾಂತ್ರ ಸದೋದಿತಾ
ಮಹಿಪತಿಸುತ ಪ್ರಭು ರಘುನಾಥ ।
ಮಹಿಪತಿಸುತ ಪ್ರಭು ರಘುನಾಥ ನೆನೆವರ
ಸಹಕಾರಿ ನಮ್ಮ ಸದೋದಿತ ೫

## ೭೨೭

ಶರಣು ಶರಣುರಾಯಾ । ಸರಸಿ–ಜಾಲಯ ಪ್ರೀಯಾ ।
ಶರಣು ಪಾವನಕಾಯಾ । ಸಲಹುನಮ್ಮಾ ಪ

ಸ್ತುತಿಯ ಮಾಡಲರಿಯೇ । ಯತಿ ಛಲಗುಣ ವರಿಯೇ ।
ಮತಿವಂತನ ಮಾಡನುಡಿಸೈಯ್ಯ । ತರಳನ । ಪತಿತ
ಪಾವನ ದೇವ ದಯಾನಿಧಿಯೇ ೧

ಶಿರಿವಧು ರಮಣನಾ ಚರಿತವ ಪೇಳುವೆ ।
ಕರುಣದಿ ಶ್ರೀಹರಿ ನುಡಿಸಿದಂತೆ । ಕೇಳಿ ।
ಧರಿಯೊಳು ಭಾಗವತರು ಯಲ್ಲಾ ೨

ಬನ್ನಿ ಸಾತ್ವಿಕ ಗುಣ ಸಂಪನ್ನ ಮುತ್ತೈದೇರು ।
ಅನ್ಯ ಭಾವನೆಗಳಿಗೆ ತೊಡಕದೇ । ಯನುತಲಿ ।
ಉನ್ನತ ಸಂಭ್ರಮದಿ ನೆರೆದರು ೩

ದಿವ್ಯಾಂಬರವನುಟ್ಟು ದಿವ್ಯಾಭರಣನಿಟ್ಟು ।
ದಿವ್ಯಾಕೃತಿಯಲಿ ವಪ್ಪುತಿಹಾ । ಮುನಿ ।
ಸೂರ್ಯಕೋಟಿ ಮದನ ಲಾವಣ್ಯನು ೪

ಅನಾದಿ ಮಹಿಮ ಮೋಹನನಾದ ಕೃಷ್ಣನು ।
ಜ್ಞಾನಾಂಗನೇ ರುಕ್ಮಿಣಿ ವಧುವಿನಾ । ಈರ್ವರಾ ।
ಅನುಭವ ದೂಟಣಿಯನ್ನು ಮಾಡಲಾರಿ ೫

ಸಡಗರದಿಂದಾ ಹೃದಯಾ ಮೊಡವಿಯೊಳೊಪ್ಪುದಾ ।
ದೃಢ ವಜ್ರದಿಂದಲಿ ರಚಿಸಿದಾ । ಜಗದಲಿ ।
ಒಡನೆ ರತಿ ರತ್ನಾಸನ ಹಾಕಿ ೬

ಮ್ಯಾಲ ಭಾವಕಿಯರು ಮೂಲೋಕವಂದ್ಯರಾ ।
ಲೋಲವಧು ವರರನು ಕುಳ್ಳಿರಿಸಿ । ಹರುಷದಿ ।
ಮೇಲೆನಿಸಿ ಊಟಣಿಯ ಮಾಡಿಸಲು ೭

ಶುದ್ಧ ಮತಿವಂತಿಯರು ಅಧ್ಯಕ್ಷರತರಾಗಿ ।
ಆಧ್ಯಾತ್ಮ ಸಾಮಗ್ರಿನಿಟ್ಟುಕೊಂಡು । ಸಿರಿ ।
ಮುದ್ದು ಶ್ರೀ ಕೃಷ್ಣನು ವಲಿವಂತೇ ೮

ನಾನಾ ಗಂಟಗಳುಳ್ಳಾ ಕಠಿಣವಾದಾ ಅಭಿ ।
ಮಾನ ಅರಿಷಿಣವನು ಸಣ್ಣ ಮಾಡೀ । ಈಗಾ ।
ಏನುಳಿಯದ್ಹಾಂಗ ವಿವೇಕದಿಂದ ೯

ಹಮ್ಮಿನರಿಷಿಣವನು ಸಮ್ಯಜ್ಞಾನದ ಕದಿ ।
ಕಮ್ಮ ದೋರುವಂತೆ ಕಲಿಸುತಾ । ಶ್ರೀವರ ।
ಬ್ರಹ್ಮನ ಪಾಪಕ ಅರ್ಪಿಸಿದರು ೧೦

ತ್ವರಿತ ಲಕ್ಷ್ಮೀ ಕಾಲಾ ಪರವಾ ವಪ್ಪಿಲೆ ಹಚ್ಚೆ ।
ಭರದಿಂದಾಕ್ಷಣ ಕ್ಷಣಕ ರುಕ್ಮಿಣಿ ಯಾಮುಖದಿಂದ ।
ಹರಿಯಾ ನಾಮಗಳನು ನುಡಿಸುತಾ ೧೧

ಭಾವನಿಂದ ರಂಜಿಸುವ ಕುಂಕುಮ ಮ್ಯಾಲೆ ।
ಆ ವಿಮಲ ಮುಕ್ತಿಯ ಶೇಶೇ ನಿಟ್ಟು ಧ್ಯಾನಾ ।
ಲೇಪಿಗಂಧವಾ ಲೇಪಿಸಿದರು ೧೨

ಪರಿಮಳ ಸುವಾಸನೆಯ ಬೇರದ ಸುಮನ ಸರವಾ ।
ಕೊರಳಿಗೆ ಹಾಕಿದೆ ಪರಿಯಿಂದಾ ಕೃಷ್ಣನಾ ।
ಕರದಿ ನೇಮಿಸಿದರು ರುಕ್ಮಣಿಗೆ ೧೩

ಆರ್ತ ಜಿಜ್ಞಾಸನು ಧನಾರ್ಥಿಯು ಬೈಲಿ ಘಳಿಗೆ ।
ಅರ್ತು ಮುಖದಲಿ ಕೊಟ್ಟು ಬಿಸುಡಿದರು ಬುಧರು ।
ನಿರ್ತದಿಂದಲಿ ನೋಡಿ ಇಬ್ಬರಿಂದ ೧೪

ಮಗುಳೆ ಸಂಕಲ್ಪಾದಾ ಬಗೆದಾ ಕುಪ್ಪಸಿನ ।
ಬಿಗಿ ಬಿಗಿದು ಕಟ್ಟಿದಾ ಗಂಟವನು ಒಂದೇ ।
ಜಗದೀಶನಾ ಕೈಯಿಂದ ಬಿಡಿಸಿದರು ೧೫

ಹರಿಯಾ ತೊಡೆಯ ಮ್ಯಾಲ ನಿಂದಿರಿಸಿ ರುಕ್ಮಿಣಿಯನು ।
ಕರದಿ ಶಾಂತಿ ಅಂಬಿ ಬಿಂಬಿಸಿದರು । ನೋಡಿ ।
ಧರಿಯೊಳಾನಂದವ ತೋರುವಂತೆ ೧೬

ತನುವಿನಾರತಿಯೊಳು ಘನದೆಚ್ಚರ ದೀಪದಿ ।
ಮನದಿಂದಾ ಜಯಾ ಜಯಾವೆಂದೂ ಬೆಳಗೀ । ಮರಹು ।
ಅನುವಾಗಿ ತಾವು ನಿವಾಳಿಸಿದರು ೧೭

ಮರೆವಾ ಪ್ರಕೃತಿ ಪುರುಷರ ಶರಗಂಗಳಾ ಯರಡಾ ।
ಭರದಿಂದ ಕಟ್ಟಿ ಸುವೃತ್ತಿಂದಾ । ಬಳಿಕಾ ।
ತ್ವರಿತ ನಿಜ ಮಂದಿರವ ಸಾರಿದರು ೧೮

ಇಂತಿ ಪರಿಯಾಗಿಹ ಅಂತರನು ಭವದಾ ।
ಕಂತುಪಿತ ಲಕ್ಷ್ಮಿಯ ಚರಿತವನು । ನೋಡಿ ।
ಸಂತತ ಸುಖವನು ಪಡೆದರೆಲ್ಲಾ ೧೯

ಇನಿತು ಸುಖ ಕರವಾದಾ ಅನುಭವ ದೂಟಣಿಯನು ।
ಅನುವಾಗಿ ನುಡಿಸಿದಾ ಯನ್ನ ಮುಖದೀ । ಈಗಾ ।
ಘನ ಗುರು ಮಹಿತಪಿ ಸುತ ಸ್ವಾಮಿ ೨೦

ತಂದೆ ತಾಯಿ ಮಿತ್ರ ಬಂಧು ಬಳಗನಾದಿ ।
ಎಂದೆಂದೂ ಶರಣರ ಸಲಹುವಾ । ದೇವನೇ ।
ಇಂದೆನ್ನ ನುದ್ಧರಿಸು ದತ್ತಾತ್ರೇಯಾ ೨೧

## ೭೨೮

ಧುಮ್ಮಸಾಲೆನ್ನಿರೈಯ್ಯಾ । ಒಮ್ಮೆ ಸಾಧು ಜನರು ।
ಬೊಮ್ಮನ ಪದವಪಡದ । ನಮ್ಮ ಮುಖ್ಯ ಪ್ರಾಣನ ಪ

ನಷ್ಟರಾವಣನ ಬಾಲಕ್ಕಿಟ್ಟ ಬೆಂಕಿಯಿಂದ ಲಂಕಾ ।
ಪಟ್ಟಣವ ಸುಟ್ಟು ಬೊಬ್ಬೆ ನಿಟ್ಟ ಹನುಮಪ್ಪನಾ ೧

ಪಾಪಕರ್ಮಕೀಚಕಾದಿ । ಕಾಪುರುಷ ಕೌರವರಾ ।
ಕೋಪಾಗ್ನಿಯಲಿ ಸುಟ್ಟ । ಭೂಪ ಭೀಮನಾ ೨

ಉದ್ಧಟ ದುರ್ವಾದಿಗಳಾ । ಸಿದ್ಧಾಂತವೆಂಬ ವಹ್ನಿಯಲ್ಲಿ ।
ಬುದ್ಧಿಯಿಂದ ಉರಹಿದಾಪ್ರ । ಸಿದ್ಧಮಧ್ವರಾಯನಾ ೩

ಮೂಲ ಗುರುವಾಗಿ ಜಗ । ಪಾಲಿಸುವಾ ಮಹಿಪತಿ ।
ಬಾಲನ ಪ್ರಿಯ ಸಿರಿ । ಲೋಲನಿಜ ದಾಸನಾ ೪

## ೭೨೯

ಧುಮ್ಮಸಾಲೆಯ ನೋಡಿ ಧುಮ್ಮಸಾಲೆಯಾ ಪ

ಧುಮ್ಮಸಾಲೆಯ ನೋಡಿ ಘಮ್ಮವಾದ ಪ್ರಾಣಿಗಳು ।
ತಮ್ಮ ಸುದ್ದಿ ತಮಗಿಲ್ಲಾ ಹಮ್ಮಿನಿಂದಲಿ ।
ಧಿಮ್ಮಹಿಡಿದು ಭವದೊಳು ಸುಮ್ಮನೆವೆ ಕೆಟ್ಟು ಹೋದ ।
ಗ್ಯಾದರೆಯು ಪರಬೊಮ್ಮನಾಮ ನೆನೆಯಿರೋ ೧

ವಿದ್ಯೆಯಿಂದ ವಾದಿಸುತ ಮುದ್ದಿಯಿಂದ ಕಣ್ಣು ಮುಚ್ಚಿ ।
ಸದ್ಯ ಶಕ್ತಿ ಯೌವನದಿ ಗುದ್ದಿ ಹೆಟ್ಟು ತಾ ।
ಮದ್ದು ಗುಣಿಕೆಯ ನೆರೆ ಮೆದ್ದವನ ಪರಿ ನಿಜ ।
ಬುದ್ಧಿ ಹೋಗಾಡಿಸಿ ಅನಿರುದ್ಧನನ ಮರೆತಿರೋ ೨

ಒಂದು ಕವಡಿಯಲಾಭ ತಮಗೆ ಹೊಂದದಿದ್ದರೆ ಸರಿ ।
ಬಂದು ನಿಂದು ಒಳ್ಳೆವರಾ ನಿಂದೆ ಮಾಡುತಾ ।
ಮತಿಗಳನೂ ಹೊಂದು ಕುಲಗಳ ತಮ್ಮ ಇಂದು ।
ಕೊಬ್ಬಿ ಕೆಡಹಿ ಅಂಧಃ ಕೂಪ ಲಿಟ್ಟರೋ ೩

ಉಡಗಿ ಬಿಟ್ಟು ಹುಡಿಯಹಚ್ಚಿ ಜಡಿಯಬಿಟ್ಟು ಸಿದ್ಧಗಾಗಿ ।
ಪೊಡವಿಲಿನ್ನು ಲಾಭಾ ಲಾಭಾ ನುಡಿಯ ಹೇಳುವಾ ।
ತುಡುಗರಿಗೆ ಹೋಗಿಕಾಲ ವಿಡಿದು ಗೋಂದಲ್ದಾಕುವರು ।
ಕಡಲಶಯನನ ಭಜಿಸದೆವೆ ಅಡಲು ಬಿಟ್ಟು ಹೋದರೋ ೪

ಸಿರಿಯ ಸುಖಗೀಪರಿ ಪರಿಯ ವೃತ ತಪದಿಂದಾ ।
ಚರಿಸಿ ನೋಡು ಕಣ್ಣು ವಿದ್ದು ಕುರುಡರಾದರೋ ।
ಗುರುಮಹಿಪತಿ ಸ್ವಾಮಿ ಚರಣ ನಂಬಿಯಚ್ಚರದಿ ।
ನಿರಪೇಕ್ಷ ಭಕ್ತಿಯಿಂದಾ ತರಣೋಪಾಯ ನೋಡರೋ ೫

## ೭೩೦

ದುಮ್ಮ ಬಸವಂತನ ಹಬ್ಬಾ ।
ದುಮ್ಮ ದುಮ್ಮೆನ್ನಿ ದುಮ್ಮ ಸಾಲವೆನ್ನಿ ಪ

ನರಜನ್ಮ ಫಾಲ್ಗುಣ ಪೌರ್ಣಿಮೆ ಬಂದಿದೆ । ಮರಿಯ
ಬ್ಯಾಡಿ ತನು ಧನ ಮನದೀ ।
ಹರಿದಾಸ ರಾಹವರೆಲ್ಲರು ಹೋಳಿಯ । ಪರಮಾನಂದದ
ಲ್ಯಾಡುವ ಬನ್ನಿರಣ್ಣಾ ೧

ಝುಮ್ಮನೆ ವಿವೇಕ ಕುಂಡವನೇ ಮಾಡಿ । ಸಮ್ಯ
ಜ್ಞಾನಾಗ್ನಿಯ ಪ್ರಜ್ವಲದಿಂದಾ ।
ಹಮ್ಮೆಂಬ ಕಾಮನ ಹೋಳಿಯದಹಿಸಿ । ಒಮ್ಮನದಿ
ನಲಿದಾಡಿರಣ್ಣಾ ೨

ಹರಿನಾಮ ಕುಂಕುಮ ಸಾರಿ ಚಲ್ಯಾಡುತ । ಧರಿಸುತ ಹೃದಯ
ಶಿರಸದಲಿ ।
ಕರದಲಿ ವಿಚಾರ ಬೆತ್ತ ಹೊಯ್ದಾಡುತ । ಹರುಷದಿಂದಲಿ
ಕುಣಿದಾಡಿರಣ್ಣಾ ೩

ಗುರುರಾಯಾ ಸಹಕಾರಿ ತಾನಾಗಿ ನಮಗಿನ್ನು । ಪರಿ ಪರಿ
ಸಾಧನ ದೋರಿಸುತಾ ।
ಕರುಣದಿ ಆಡಿಸುತಿಲ್ಲಿ ನಿಂದಿರಲು । ಮರಿತಭಯಕ ಅಂಜ
ಬ್ಯಾಡಿರಣ್ಣಾ ೪

ಮೊದಲ ಸಂಚಿತ ಬೂದಿಯ ಚಲ್ಲಿ ಪರಮಾ । ರ್ಥದ
ಗಂಗಿಯೊಳು ಮಿಂದು ಶುಚಿಯಾಗಿ ।
ಸದಮಲ ಮಹಿಪತಿ–ನಂದನ ಪ್ರಭು ಪದ ।
ಪದುಮಾಶ್ರಯದಿಂದ ಗತಿಪಡಿರಣ್ಣಾ ೫

## ೭೩೧

ದುಮು ದುಮು ಬಸವಂತನ ಹಬ್ಬಾ ಪ

ರಾಮಕೃಷ್ಣ ಗೋವಿಂದ ಮುರಾರಿ । ಶಾಮ ಸುಂದರ
ಸುರಜ ಸಹಕಾರಿ ।
ಕಾಮಿತ ಫಲಗಳ ನೀವ ಉದಾರಿ । ಶ್ರೀ ಮಾಧವನೇ
ಕಾಯೋ ಚರಣವ ದೋರಿ ೧

ನಿನ್ನ ಮರ್ತದ ಕಾರ್ಯದಲಿ ನೊಂದೆ । ಬನ್ನ ಬಡುತಲಿ ಬಲು
ಭವದಲಿ ಬಂದೆ ।
ಮುನ್ನಿನ ತಪ್ಪವನೆಣಿಸದೆ ತಂದೆ । ಚೆನ್ನಾಗಿ ರಕ್ಷಿಸು
ನಮೋ ನಮೋ ಎಂದೆ ೨

ಈ ರೀತಿಯಿಂದಲಿ ಹರಿಯ ಕೊಂಡಾಡಿ । ಆ ರಾಧಿಪ
ನವವಿಧದಲ್ಲಿ ಕೂಡಿ ।
ನಾರಕ ಭಯಗಳುವನು ಮೂಲದೀಡ್ಯಾಡೀ । ಸೂರ್‍ಯಾಡು
ಸ್ವ ಸುಖ ಎಲೊ ಹುಚ್ಚು ಖೋಡಿ ೩

ಮುನ್ನಿನ ಪುಣ್ಯದಿ ನರದೇಹ ತಾಳಿ । ಮಾನವನಾಗಿ
ಹರಿಕಥೆ ಕೇಳಿ । ಚೆನ್ನಾಗಿ ವಿಷಯದಲನುದಿನ ಬಾಳೀ ।
ನಿನ್ನ ವೈರಿ ನೀನಾದೆ ಗೈಯ್ಯಾಳಿ ೪

ಮೃಗಜಲ ಹೋಲುವ ವಿಷಯಾ ನಂದಾ । ಬಗೆದೆಲೋ
ಶಾಶ್ವತವೆಂದು ನಿನ್ನಿಂದಾ ।
ಭಕುತಿಯ ಮಾರ್ಗವ ಬಿಟ್ಟೆಲೋ ಛಂದಾ । ಜಗ
ದೊಳಗಾದೆಲೋ ನೀ ಮತಿ ಮಂದಾ ೫

ಹೆಂಡರು ಮಕ್ಕಳು ಮಮತೆಯ ಸ್ಥೂಲಾ । ಖಂಡದಿ
ಬಿದ್ದಿದೆ ಕಾಲಿಗೆ ಕೋಳಾ ।
ಕಂಡವರಿಗೆ ಹಲ್ಲದೆರುವುತ ಖೂಳಾ ।
ಅಂಡಲೆವುತ ಹೊಟ್ಟೆಹೊರೆದೆಲೋ ಮೂಳಾ ೬

ಸಂಸಾರ ತಾಪತ್ರಯ ಖಣಿಯೆಂದು । ಭ್ರಂಶನೆ
ಸುಖವಿಲ್ಲ ಇದರೊಳಗಿಂದು ।
ಕಂಸಾರಿ ಪದವಿಡಿ ಜನ್ಮಕ ಬಂದು ।
ಅಂಶಿಕ ದೇಶಿಕನ ಪಾದ ಹೊಂದು ೭

ಶರಣ್ಹೋಕ್ಕು ಗುರುವಿನ ಪಾದದಲಿಟ್ಟು ।
ತ್ವರಿತದಿ ಭಾವಭಕ್ತಿಗೆ ಗಮನವಿಟ್ಟು ।
ಅರಿತುಕೊಳ್ಳೆಲೋ ಪರಮಾರ್ಥಗುಟ್ಟು ।
ತರಳನಾಗಿ ಹೋಗದಿರೆಲೋ ಕೆಟ್ಟು ೮

ತನು ತಾನೆಂಬುದು ವಿಡಿದ ಅಹಂತಾ ।
ಚಿನುಮಯ ಗೆಚ್ಚರಗಳೆದೆಲೋ ಭ್ರಾಂತಾ ।
ಅನುವಾಗಿ ಚರ್ಮದ ಬೊಂಬಿ ಮಾಡಿತಾ ।
ಕುಣಿಸ್ಯಾಡುತಿ ಹನು ಅಚ್ಯುತಾನಂತಾ ೯

ಒಬ್ಬರು ಇದರೊಳು ಧನಮದ ಹಿಡಿದು
ಒಬ್ಬರು ಶಾಸ್ತ್ರದ ಮದದಲಿ ಬಿಗಿದು
ಒಬ್ಬರು ಗಾಯನ ವಿದ್ಯದಿ ಮೆರೆದು ।
ಉಬ್ಬುಬ್ಬಿ ಕುಣಿದರು ಹೇಳಲೇನಿಂದು ೧೦

ಸೃಷ್ಟಿಯೊಳು ಸಿರಿಸಂಪದ ನೆಚ್ಚಿ ।
ಅಷ್ಟಮದದಿಂದ ಕಣ್ಣು ಮುಚ್ಚಿ ।
ಶಿಷ್ಟರ ಕಂಡರ ಬಾಗನು ಹಚ್ಚಿ ।
ಕುಟ್ಟುವಾಗ ನೆಲ್ಲಿಕಾಲನು ಘಟ್ಟಿಸಿ ೧೧

ಸಂತರರೂಪ ಕಣ್ಣಿಲಿ ನೋಡಲಿಲ್ಲಾ ।
ಸಂತರ ಕಥೆ ಕಿವಿಯಲಿ ಕೇಳಲಿಲ್ಲಾ ।
ಸಂತರ ಪಾದಕ ನಮನ ಕೊಡಲಿಲ್ಲಾ ।
ಭ್ರಾಂತನೆ ನಾಳೆ ಮುರಿವನು ಹಲ್ಲಾ ೧೨

ಮರ್ಥವೆಂಬಾ ಹೋಳಿಯ ಅರವ್ಹಾಗ್ನಿಯಲ್ಲಿ ।
ನೆರೆದಹಿಸುತ ದುರ್ಮದ ಬೂದಿ ಚೆಲ್ಲಿ ।
ಗುರು ಕೃಪೆ ಗಂಗೆಯ ಸ್ನಾನ ಮಾಡುತಲಿ ।
ನರಜನ್ಮ ಸಾರ್ಥಕ ಮಾಡೆಲೊಹುಳ್ಳಿ ೧೩

ತಂದೆ ಮಹಿಪತಿ ಘನದಯದಿಂದ ।
ಕಂದನು ಸಾರಿದಾ ಹೋಳಿಯಾ ವಂದಾ ।
ತಂದರ ಮನದಲ್ಲಿ ಮಡಿಯಾರ್ಥ ಛಂದಾ
ಇಂದಿರೆಪತಿ ತಾರಿಸುವ ಭವ ಬಂದಾ ೧೪

## ೭೩೨

ಆರಿಲ್ಲಿಲ್ಲೋ ಮನುಜಾ । ಅರಿಲ್ಲಿಲ್ಲೋ ।
ಹರಿಭಕ್ತರಿಗೆ ಸರಿ ಉಂಟೇನಣ್ಣಾ ।
ಆರಿಲ್ಲಿಲ್ಲೋ ತಮ್ಮಾ । ಬಿರದಿನ ಫಲಗಳ ನಡೆಸುವರಯ್ಯಾ ಪ

ಕಂಭದೊಳಗ ಹರಿ ಬಿಂಬವ ತೋರಿಸಿ ।
ಬೆಂಬಲವನೆಕೊಂಡು ಹಿರಣ್ಯ ಕನಾ ।
ವೆಂಬ ಶಾರ್ದೂಲ ಕರಳವ ಹಾರಿಸಿದ ।
ನಂಬಿದ ಪ್ರಲ್ಹಾದ ಮಾಸಾಳ ನಮಾ ೧

ಕಂಡು ಸೀತಾಪತಿ ನೊಯ್ದು ರಾವಣ ನೆಂಬಾ ।
ಖಂಡಿಸಿ ಮದ ಸೊಕ್ಕಿದಾನಿಯನು ।
ತುಂಡ ಮುಂಡ ಮಾಡಿ ಪದವಿಯ ಪಡದಾ ।
ಚಂಡ ವಿಭೀಷಣ ಮಾಸಾಳ ನಮಾ ೨

ಖಂಡ ದಾಸನಬೇಡಿ ಹೊಂದಿದ್ದ ಕಾಯನ ।
ಸಂದ ಬಿಡಿಸಿ ಮಲ್ಲಯುದ್ಧದಲಿ ।
ಮಂದರ ಧರನತಿ ಮೆಚ್ಚಿಸಿ ಮೆರೆದಾ ।
ನಂದ ಭೀಮಶೇನ ಮಾ–ಸಾಳ ನಮಾ ೩

ತರಣೆಂದು ಗಾಲಿಲಿ ರಥ ಬೊಮ್ಮ ಸಾರಥಿ ।
ಉರಗಸ ಹದಿ ಮೇರು ಗಿರಿ ಪಾಪವು ।
ಹರಿಶರದಿಂದಲಿ ತ್ರಿಪುರವ ಕೆಡಹಿದ ।
ಸುರ ರಕ್ಷ ಮಹೇಶ ಮಾಸಾಳನಮಾ ೪

ಹಿಂದಿನ ಮಾತಿಂದು ಇಂದಿಲ್ಲ ವೆನಬ್ಯಾಡಿ ।
ಎಂದೆಂದು ಸ್ವರ್ಗದ ಸುಖಗಳಿಗೆ ।
ಕುಂದವ ನಿಡುವರು ಮಹಿಪತಿ ಸುತ ಪ್ರಭು ।
ಹೊಂದಿದ್ದ ದಾಸರು ಮಾಸಾಳರೈಯ್ಯಾ ೫

## ೭೩೩

ನಿಂತು ಘುಗಡಿ ಹಾಕ ಭ್ರಾಂತತನವ್ಯಾಕ
ಸಂತ ಜನನಿಯರು ನೋಡಿ ತಲೆಯ ದೂಗಬೇಕ ಪ

ಆಶೆಯಲಿ ತಾನು ಕುಳಿತು ಹಾಕುದೇನು ।
ಘಾಸಿಯಾಗುವ ಆರುಮಂದಿಯಾ ಕೂಡಿದರೇ ನೀನು ೧

ಗರುವ ತನ ಬಿಟ್ಟು ತಿರುಗಣೆಯಾ ನುಟ್ಟು ।
ಆರಹು ಶರಗಿನಿಂದ ಬಿಗಿದು ಹಾಕ ಮಲಕ ಗಂಟು ೨

ಲಜ್ಜೆ ವಳಿದು ನೋಡೇ ಹರಿಯಸ್ತುತಿ ಮಾಡಿ ।
ಘಜ್ಜಿಗೆ ಬಂಡಮ್ಯಾಲ ಯಚ್ಚರ ಮೈಯ್ಯ ಮರೆಯಿಬ್ಯಾಡೇ ೩

ಎರಡು ಸವೆ ನಿನೆಹಾ ಜ್ಞಾನ ಸಖೀ ಕೈಯ್ಯಾ ।
ಜರಿಯದಂತೆ ಹಿಡಿದು ತಿರುಗು ನಡವಿಧ ಪರಿಯಾ ೪

ಘುಗಡಿ ಇದೇ ಆಡೀ ಪ್ರೇಮಭಾವ ಕೂಡೀ ।
ಮುಗುತಿ ಕೊಡುವ ತಂದೆ ಮಹಿಪತಿ ಸ್ವಾಮಿ ದಯಮಾಡಿ ೫

## ೭೩೪

ಉದೋ ಉದೋ ಉದೋ ಉದೋ ಉದೋ ಯನ್ನಲು
ಉದ ಮುದೋ ಪ

ತಮ್ಮನು ಪೊಗಳಿ ಪಾಲೆನೆ ಅಮ್ಮೊಮ್ಮಾ ।
ಮೊಮ್ಮನ ಪಡೆದಿಹ ಜಗದಯ್ಯಾ ।

ಸುಮ್ಮನ ಹೊಂದಿಹ ಬಾಲಕ ನಿಮ್ಮಾ ।
ಝುಮ್ಮನೆ ಸ್ಮರಣೆಗೆ ಬಾನಮ್ಮಾ ೧

ಛಂದ ವಿವೇಕದ ಚೌಡಕಿ ಹಿಡಿದು ।
ಒಂದೇ ನಿಷ್ಠೆಯ ತಂತಿಯ ಬಿಗಿದು ।
ಸುಂದರ ಭಕ್ತಿಯ ರಂಗಕ ಬಂದು ।
ಗೊಂದಳ ಹಾಕುವೆ ನಾನಿಂದು ೨

ನಾಮಾವಳಿ ಕವಡೆಯ ಸರಥರಿಸಿ ।
ಪ್ರೇಮದ ಬಂಡಾರವ ಸುರಿಸಿ ।
ಆಮಹಾಜ್ಞಾನದ ಹೊತ್ತ ಪ್ರಜ್ವಲಿಸಿ ।
ನಾಮಗೆಜ್ಜಿಲಿ ಕುಣಿವೆನು ಘಲಿಸಿ ೩

ಆವನಿಯ ಸುಜನರ ಮೊರೆಯನು ಕೇಳಿ ।
ಅವತಾರವ ಹೊಸ ಪರಿ ತಾಳಿ ।
ಭವ ಮಹಿಷಾಸುರ ನಸುವನು ಹೋಳಿ ।
ಜವದಲಿ ಮಾಡಿದೆ ತುನುಶೀಳಿ ೪

ಮುನಿ ಮಾನಸ ತುಳಜಾಪೂರ ಗೇಹಿ ।
ಖೂನದೊರಿಸೀ ನಿಜ ಸೋಹೀ ।
ಏನೇ ನರಿಯದವನೆಂದರಿತು ಕಾಯೀ ।
ಘನಗುರು ಮಹಿಪತಿ ವರದಾಯಿ ೫

## ೭೩೫

ಒಳ್ಳಾದು ಬರುತಾದೆ ಒಳ್ಳಾದು ಬರುತಾದೆ ।
ಒಳ್ಳಾದು ಬರುತಾದೆ ಕೈಯ್ಯದೋರೆ ।
ಗೋಪೆಮ್ಮ ಕೈಯ ನೋಡೇನು ಪ

ಹೆತ್ತವಸರ ಬುಟ್ಟಿ ಹೊತ್ತದಿವ್ಯಂಬರ ಕೊರವಿ ।
ಉತ್ತಮದಾ ನುಡಿಗಳನು ಸತ್ಯಾಪುರದಿ ಹೇಳಬಂದೆ ।
ಕೈಯ್ಯದೋರೆ ೧

ಮಥುರಾನಗರದಲ್ಲಿ ಮದನಮೋಹನಾ ಜನಿಸಿ ।
ಸದೆದು ಕಂಸಾದ್ಯರೆಲ್ಲಾ । ವದಗಿ ಹರಿವಾ ಕರಿಯಾ ನಿಮ್ಮ ।
ಕೈಯ್ಯದೋರೆ ೨

ವರ ಉಗ್ರಶೇಸನಿಗೆ ಅರಸು ತನವಾ ಕೊಟ್ಟು ।
ಪರಿ ಪರಿ ಕರುಣೆಯಿಂದಾ । ಶರಣರನು ಹೊರೆವ
ನಮ್ಮಾ ಕೈಯ್ಯದೋರೆ ೩

ಮೌನಾಕಾ ವಲಿಗೆ ಹಾಕಿ । ತಾನು ಗೋಕುಲದಿ ಬೆಳೆದು
ನಾನಾ ಉಪಾಯದಿ ಬಂದಾ । ದಾನವರ ಗೆದ್ದಾ ನಮ್ಮ ।
ಕೈಯ್ಯದೋರೆ ೪

ಸಹಕಾರಿ ಸುರರಿಗಾಗಿ । ಮಹಿ ಭಾರ ನಿಳುಹಲಾಗಿ ।
ಮಹಿಪತಿ ಸುತಪ್ರಭು ।
ಮಹಿಮೆ ದೋರ ಬಂದಾನಮ್ಮ । ಕೈಯ್ಯದೋರೆ ೫

## ೭೩೬

ವಾರಿಜ ಸಂಭವ ತನಯ ತುಂಬುರ ಮಾಳ್ಪಾ
ಚಾರು ಗಾಯನ ರತನಾ ।
ಮಾರನಾ ಪಡೆದ ಲಾವಣ್ಯಾ ರಾಶಿ
ಸಾಕಾರನ ತಂದು ತೋರೇ ಪ

ಚರಣರು ಉಳ್ಳನ ಪೋರವದ ಪೆಸರಿನಾ
ಇರುವ ದಿಕ್ಕಿನೋಳಿಹನಾ
ಪರಮ ಮಿತ್ರನಾಹಾರಾ ಮಾಳ್ವರಿಯಣ್ಣನಾ ನಿರುತ ಸೇವೆಯ

ಕೊಂಬನಾ । ಶರೀರದಿ ಜನಿಸಿದಾವಳ ಕೂಡಿಕೊಂಡಳ ಅರಸನ
ತನುಭವನಾ । ಧರಿಸಿದವನಕೂಡಾ
ಸ್ನೇಹವ ಮಾಳ್ಪನಾ ಹರಿಣಾಕ್ಷಿ ತಂದು ತೋರೇ ೧

ಎರಡು ಮೂರೈದನೆಯಾ ರಾಶಿ
ಯೊಡಲೊಳು ತ್ವರಿತದಿ ಜನಿಸಿದನಾ ।
ಭರ ಕೋಪಕ ಉದರವ ಪೊಕ್ಕು
ಬಂದನಾ ಶರದೆಚ್ಚ ಸ್ಥಳ ಕೊಂಡನೇ ।
ಕರದನು ನೆಗೆದಾಡಿದಳಾಕೃತಿ ವೈದ
ಅಸುರನ ಕಂದನಾ ಕೊಂದನಾ ।
ಇರುಳೊಳು ಪ್ರಾಣವ ಪಡೆದ ನೊಡೆಯಾ
ಜಗ ದರಿಯನ ತಂದು ತೋರೇ ೨

ಒಂದು ಇಪ್ಪತ್ತಾರನೆಯಾ ತಾರೆ ಅಭಿದಾನಾ
ಮಂದಗಮನಿ ಪ್ರಿಯನಾ ।
ಛಂದುಳ್ಳ ತಂಗಿಯಾಗರ್ಭದಿ ಬಂದನಾ
ಮುಂದ ಗಾಣದ ಲೊಲ್ಲನಾ ।
ಅಂದು ಪಗಲಿರುಳು ಮಾಡಿ ನರನ
ಕೈಯಿಂದ ಕೊಲಿಸಿದನಾ ।
ತಂದೆ ಮಹೀಪತಿ ನಂದನ ಪಾಲಿಪಾ
ನಂದನ ತಂದು ತೋರೆ ೩

## ೭೩೭

ಕಂಜ ಬಿಂಬಾನನೆ ಕಂಜ ಸತ್ಕೂಲಪರ ಕಂಜ ಸಾಸಿರ ಶಿರನಾ ।
ಕಂಜ ಶರನಪಿತ ಕಂಜ ಚರಣನ ಕಂಜಾಕ್ಷಿ
ತಂದು ತೋರೇ ಪ

ಮೊತ್ತ ವೆನಿಪ ಹಿಮಧಿಪ ತನುಜಯ
ಕೂಡಾ ನಿತ್ಯದಿ ಕ್ರೀಡಿಪನಾ ।

ನೆತ್ತಿಯೊಳನುಹಾನೆ ಇಪ್ಪಳ ಸಂಗಡ ಅತ್ತಿತ್ತಗಲ ದವನಾ ।
ಹತ್ತೆರನೆಯಾ ಅರಸಿಯಾ ಪೆಸರ್ಪಡೆದಳ
ಚಿತ್ತೆದೊಲ್ಲಭ ನೈಯನಾ ।
ಹೆತ್ತ ತಾಯಿಯಣ್ಣ ನರಸಿ ಉದರದಲಿ
ಬಂದ ಸತ್ಯ ಶಾಶ್ವತನ ತೋರೆ ೧

ಘನ ಗುರುವಿನ ಶರೀರವ ತನ್ನ ಶರದಿಂದ
ಚಿನಿಗಡಿದ ಕುವರನಾ ।
ತ್ರಿನಯನ ವರದಿಂದ ಪಡೆದನ
ಹಿರಿಯಳಿಯನಾ ತಂದೆಯಾ ಪಿತನಾ ।
ಜನಕನ ಸುತನಾಗಿ ತ್ರಿಭುವನ ಮಾಡಿ ಪಾ ।
ವನವ ಶರಭಿ ಧಾನ ।
ಜನ ವರವಿತ್ತು ಭಕ್ತನೆನಿಸಿದ
ಶ್ರೀ ವನಜನಾಭನಾ ತಂದು ತೋರೆ ೨

ಸುರನದಿ ಮೊಮ್ಮ ಸುತನ ಹರಿಬಕ ಬಂದ
ಸರಸಿಜ ಸಖ ಸುತನಾ ।
ಶರದಿಂದ ಇರಲೊಳು ಅಸುವನದೋರದ
ಅಸುರನ ಮಾತೆಯರಸನಾ ।
ಕರದಿಂದ ಸಂದಿದ್ದ ದೇಹಿಯ ಕೊಳೆ ಭಕ್ತರ ದುರಿತರ್ಧಿಸಿದನಾ ।
ಗುರುವರ ಮಹಿಪತಿ ಸುತನ ಅಭಯವಿತ್ತು
ಪೊರೆವನ ತಂದು ತೋರೆ ೩

## ೭೩೮

ಸಾರೋ ಅಭಿಮಾನೀ ವಾದೀ ಬೋಧ ಬಂದನು ಮಾ ।
ಪ್ರಪಂಚ ಗೆಲುವವ ನಾರೆಲಮಾ ನಮ್ಮ ।
ಶ್ರೀ ಪತಿ – ಭಕ್ತರು ಕಾಣೆಲಮಾ ಪ

ಎನಗಾರು ಇದಿರಿಲ್ಲ ಸ್ವರಾಜ್ಯದೊಳಗಿಂದು ।
ನೀನಾರೋ ಪರದೇಶಿ ಹೇಳಲಮಾ ।

ನಾನೆಂಬ ಹಮ್ಮಿನ ಬಿರುದನ ಬಿಡಿಸುವ ।
ನಾನೆಂಬ ಹಮ್ಮಿನ ಬಿರುದವ ಬಿಡುಸುವ ।
ಜ್ಞಾನ ಶಸ್ತ್ರಧಾರಿ ಬೋದನುಮಾ ೧

ಸರಸಿದ ಭವರುದ್ರ ಇಂದ್ರರ ಬಗೆಯದ ।
ನೆರೆ ಕಾಮ ಗೆಲುವವ ರಾರೆಲಮಾ ।
ಪರಮ ಭಾಗವತ ಶುಕ ಹನುಮಂತನು
ಮೆರೆವ ಭೀಷ್ಟ ದೇವ ನಲ್ಲೇನುಮಾ ೨

ವೈಕುಂಠದೊಳು ಸನಕಾದಿಕರೊಳು ಹೊಕ್ಕ ।
ಆ ಕೋಪ ಕಾನುವ ನಾರೆಲಮಾ ।
ಸಾಕಿ ಬೆಳೆಸಿದ ಶಾಂತಿಯ ನೆಲೆಯಿಂದ ।
ಪ್ರಖ್ಯಾತ ಕದರಿಯು ಕೇಳಲಮಾ ೩

ಧರಿಯಿತ್ತ ರಾಮಗ ಸ್ಥಳ ವಿಲ್ಲೆಂದರು ಬ್ರಾ ।
ಹ್ಮರು ಲೋಭಗೆದ್ದ ವನಾರೆಲಮಾ ।
ಮರುಳ ಕೇಳು ಧನ ತೃಣ ಸಮ ಬಗೆದರು ।
ಹರಿಶ್ಚಂದ್ರ ಕರ್ಣ ರಲ್ಲೇನು ಮಾ ೪

ಬೆಟ್ಟದಿ ಉಡಿಹಾಕಿ ಕೊಳ್ಳಲು ಹೋದನ ।
ಶಿಷ್ಯ ಮೋಹನ  ಗೆಲುವ ನಾರೆಲ ಮಾ ।
ಮುಟ್ಟಿ ಬೇಡಲುಳಿವ ಮಹನ ತಂದಿಟ್ಟನು ।
ಸೃಷ್ಟಿ ಮನುಜ ಚಿಲ್ವಾಳಲ್ಲೇನು ಮಾ ೫

ಭೃಗು ಮುನಿದಕ್ಷನು ಕಾರ್ತ್ಯ-ವೀರ್ಯಾದಿಯ ।
ಬಗೆಯದ್ದ ಮದ-ವಳಿ ದಾರೆಲ ಮಾ ।
ಜಗ ಪೊಡೆತನವಿದ್ದು ಬಾಗಿ ನಡೆದ ನಮ್ಮ ।
ಸುಗುಣ ಜನಕರಾಯ ನಲ್ಲೇನು ಮಾ ೬

ಹುಚ್ಚಾದ ವಶಿಷ್ಟನೊಳು ವಿಶ್ವಾಮಿತ್ರನು ।
ಮತ್ಸರಿಲ್ಲದವ ನಾರೆಲ ಮಾ ।
ಎಚ್ಚರಿಸಿದ ಸುಯೋಧನಗ ವಿಜಯತನ ।
ಸಚ್ಚರಿತ ಧರ್ಮ ನಿಲ್ಲೇನು ಮಾ ೭

ಬಗೆ ಬಗೆ ವಿಷಯ ದುಪಾಯಗಳೆನಗುಂಟು ।
ನಿಗದಿಯ ನಡೆನುಡಿ ಕೇಳೆಲ ಮಾ ।
ಭಗವದ್ಭಾವ ಸರ್ವ ಭೂತದಿ ನೋಡಲು ।
ವಿಗುಣವೆ ಸದ್ಗುಣ ಭಾಸುದ ಮಾ ೮

ನಿನ್ನ ಬಲವ ಕಂಡೆ ಶರಣವ ಹೊಕ್ಕೆನು ।
ಎನ್ನ ರಕ್ಷಿಸು ಬೋಧ ಕೇಳೆಲ ಮಾ ।
ಸನ್ನುತ ಮಹಿಪತಿ ಸುತ ಪ್ರಭು ನೆಲೆದೋರಿ
ಮನ್ನಿಸಿ ಹೊರೆವನು ಬಾರೆಲಮಾ ೯

## ೭೩೯

## (ಅನುಭವ ಬಾರಾಮಾಸ)

ಏನೆಂದು ಹೇಳಲಿ ಶಾಂತಳೇ ಬುದ್ಧಿವಂತಳೇ । ವರ್ತ
ಣೂಕದೆನ್ನ ಮಾತಾ । ಶ್ರೀನಾಥ ನಂಘ್ರಿಯ ನೋಡದೇ ಒಮ್ಮೆ
ಕೂಡದೇ । ಹೋಗುತಿದೇ ದಿನ ವ್ಯರ್ಥ । ಮಾನವ ಜನು
ಮದಿ ಬಂದೆನು ಹೊಂದಿ ನಿಂದೆನು । ಮೆರೆದೆನು
ಸ್ವಹಿತಾ । ನಾನಾ ಹಂಬಲ ದೊಳು ಶಿಲುಕಿದ ಬಲು ಬಳಲಿದ ।
ದೊರಯದು ಪರಮಾರ್ಥ ।

## ಶ್ಲೋಕ ೧

ಭರತ ಖಂಡದಿ ಬಂದ ನೃದೇಹವಾ । ಮರೆದು ಮಾಡಲಿಬಾರದು
ಹೇಯವಾ । ತ್ವರಿತ ನಂಬುದು ಶ್ರೀ ಹರಿ ಪಾದವಾ ।
ಗುರು ಮಹಿಪತಿ ಸಾರಿದ ಬೋಧವಾ ।

## ಪದ

ಮುಕುತಿ ಸಾಧನ ಮಾರ್ಗಶೀರ್ಷ ಮಾಸಾ ವಿಶೇಷಾ ।
ಧರಿಯೊಳು ಇದರಿಂದಾ । ಯುಕುತೊಲು ಹೋಗಿ ನಿರಂತರಾ
ಸಾಧು ಸಂತರಾ । ಅವರ ಚರಣಾರವಿಂದಾ ।
ಭಕುತಿಲಿ ಮುಟ್ಟಿವಂದಿಸಲಿಲ್ಲಾ ಹೊಂದಿಸಲಿಲ್ಲಾ ।
ಅಹಂಕಾರದಲಿಂದಾ । ಅಖಿಳ ದೊಳಾರಿಗೆ ಬಾಗದೇ ದಿನನೀಗದೇ ।
ಮೋಟ ಮರ ನಿಲುಲುಂದಾ ।

## ಶ್ಲೋಕ ೨

ಮೆರೆವ ಅವಯುವದೊಳು ಉತ್ತು ಮಂಗದಿ ನಿಂದು ।
ಹೊರಿಯ ಲುದರ ಕಾಗೀ ಬಾಗುವೀ ನೀಚಗಿಂದು ।
ಹರಿ ಶರಣರ ಕಂಡು ವಾಕ್ಯ ನಮನವೇನು । ಗುರು
ಮಹಿಪತಿ ಸ್ವಾಮಿ ವಲಿಯನೆಂದಿಗೆ ತಾನು ।

## ಪದ

ಭವ ಜನುಮಕ ಮಾಸ ಶೂನ್ಯವೇ ನೋಡು ಶ್ರವಣವೇ ।
ಮಾಡಿ ಸ್ಥಿರ ಮನುಚಿತಾ । ಸವಿ ಸವಿಯಲಿ ನಿತ್ಯ
ನೂತನಾ ತೋರದನುಮಾನಾ । ಶ್ರೀ ಗೋವಿಂದ ಚರಿತಾ ।
ಹವಣದಿ ಸಂತರ ಮುಖದಿಂದಾ ಅನುಸರಣೆಂದಾ ।
ಕೇಳಲಿಲ್ಲನರತಾ । ಅವನಿಲಿ ದುಷ್ಟಪ ಕೀರ್ತಿಯಾ ಅನ್ಯ
ವಾರ್ತರಿಯಾ । ಆಲಿಸಿದೇ ಸುಖ ಬಡುತಾ ।

## ಶ್ಲೋಕ ೩

ಮೆರೆವ ರತ್ನದ ಕುಂಡಲ ವಿಟ್ಟಿಹಾ । ಹರಿ ಕಥಾಮೃತ
ಕೇಳುದು ಬಿಟ್ಟಿಹಾ । ಗಿರಿಯ ಗುಹ್ಯವೋ ಕರ್ಣವೋ
ಮಂದನಾ । ಅರಿತು ಸಾರಿದ ಮಹಿಪತಿ ನಂದನಾ ।

## ಪದ

ನೋಟ ಉನ್ಮನಿ ನದಿ ಮಾಘವೇ ಮಹಾಯೋಗವೇ ।
ಲಯ ಲಕ್ಷಿಯ ಲಿಂದು । ನೀಟದಿ ಹರಿಯಾವತಾರದಾ
ಸಾಕಾರದಾ । ಮೂರ್ತಿ ಧ್ಯಾನಕ ತಂದು । ಧಾಟಿಲಿ ಸಮ
ದೃಷ್ಟಿ ಬಲಿಯದೇ ಅಲ್ಲ ಚಲಿಸದೇ । ನಾನಾ ಬಯಕೆಯ
ವಿಡಿದು ತ್ರೋಟಕ ದೈವ ನೋಡಿದ ಮತ ಕೂಡಿದ ।
ನೀಚ ವೃತ್ತಿಗೆ ಬಿದ್ದು ।

## ಶ್ಲೋಕ ೪

ಅಂಗನೆಯರ ಶೃಂಗಾರ ನೋಡುವಾ । ರಂಗನಾಕೃತಿ ನೋಡಲಿ
ಬಾಡುವಾ । ಕಂಗಳೋಸಿ ಖಿಗಿಲಿಗಳೋ ಮಂದನಾ ।
ಇಂಗಿತ್ತೇಳಿದ ಮಹಿಪತಿ ನಂದನಾ ।

## ಪದ

ಪುಣ್ಯ ಫಲಗುಣ ಮಾಸವೇ ವಬಿಗಿಯೇರ ಸನವೇ ।
ಎಚ್ಚರಿತು ಇದರೊಳಗೆ । ಸನ್ನುತ ಶ್ರೀಹರಿ ನಾಮವಾ
ವಿಡಿದು ಪ್ರೇಮನಾ । ಪದ ಪದ್ಯಲೀಗ । ಚೆನ್ನಾಗಿ
ಕೀರ್ತನೆ ಮಾಡದೇ ಗತಿಬೇಡದೇ । ಪಾತಕಕೆ
ಗುರಿಯಾಗೆ । ಅನ್ಯರ ನಿಹಪರ ಸ್ತುತಿಗಳಾ ಹುಸಿನುಡಿಗಳಾ ।
ಆಡಿಬರಡಾದೆ ನೆಲಿಗೆ ।

## ಶ್ಲೋಕ ೫

ಸಿರಿಕಾಂತಾ ನತಶಮಿತ ದುರಿತಧ್ವಾಂತ ಯನುತಾ ।
ಹರಿನಾಮಾ ಪ್ರೇಮ ವಿಡಿದು ಸ್ಮರಿಸಾದಿಪ್ಪವನುತಾ ।
ನರಾಧಮಾನೇ ಮಾವನ ಮುಖವೋ ನೃಪಮಾಯ
ಮುಖವೋ । ಅರುಹಿದಾ ಬೋಧಾ ಗುರು ಮಹಿಪತಿ
ಸ್ವಾಮಿ ಸುಖವೋ

## ಪದ

ದೋಷನಾಶಕ ಪ್ರಣವಧ ಕ್ಷೇತ್ರಾ ಮಾಸವೀ ಚಿತ್ರಾ ।
ಪವನನಾ ನೆಲೆಗೊಳಿಸಿ । ಮೀಸಲ ರೇಚಕ ಪೂರ್ವಕಾ ಧೃಡ
ಕುಂಭಕಾ । ದಿಂದ ಮಂತ್ರವ ಜಪಿಸಿ । ವಸುದೇವನ ಪಾದ
ನಿರ್ಮಾಲ್ಯ ಆಘ್ರಾಣಿ ಸಲಿಲ್ಲಾ । ಭೋಗ ದ್ರವ್ಯವ ಬಯಸಿ ।
ಲೇಸಾದ ಪರಿಮಳವನೇ ತಂದು ವಾಸಿಸುತ ನಿಂದು ।
ಮೈಯ್ಯ ಮರ್ತೆನು ಚಲಿಸಿ

## ಶ್ಲೋಕ ೬

ಪರಿಮಳಂಗಳ ವಾಸನೆಗ್ಗಿಗ್ಗುಯವಾಸಿರಿ । ತುಳಸಿಯ ತೋರಲು
ಸಗ್ಗುವಾ । ಇರುವ ನಾಶಿಕೋತ್ತಿತ್ತಿಯೋ ಮಂದನಾ । ಅರಿತು
ಸಾರಿದ ಮಹಿಪತಿ ನಂದನಾ ।

## ಪದ

ತನುವೆಂಬೋ ವೃಕ್ಷ ಕಿವೇ ಶಾಖಾ ಹಸ್ತಾ ಮೌಲಿಕಾ ।
ದೇವ ಪೂಜದರಿಂದ । ಘನವಾದಾ ತುಳಸಿ ಪುಷ್ಪಗಳನು
ತಂದು ಹಲವನು । ಸಹಸ್ರ ನಾಮಗಳಿಂದಾ । ಅನುವಾಗಿ
ಹರಿಗೆ ಏರಿಸಲಿಲ್ಲಾ ಅರ್ಪಿಸಲಿಲ್ಲಾ ಮರಹು ಆಲಸ್ಯದಿಂದಾ ।
ವನಿಯೊಳು ಪಗಡಿ ಪಂಚಿಗಳನು ಆಡಿ ದಿನವನು ।
ನೂಕಿದನು ಇದರಿಂದಾ ।

(ತನಗಿಂದ ದೀನದುರ್ಬಲರನು ಕಂಡು ಹೊಡೆವನು ।
ಹೋಗಾಡಿದ ನಿಜಾನಂದ )

## ಶ್ಲೋಕ ೭

ಹರಿಯ ಸೇವೆಯ ಮಾಡಲು ಬೀಳುವಾ । ಮೆರೆವ ಕಂಕಣ
ಮುದ್ರಿಕೆ ತಾಳುವಾ । ಕರವೋ ಮದನಾ ಕೈಯ್ಯವೋ
ಮಂದನಾ । ಅರಿತು ಸಾರಿದ ಮಹಿಪತಿ ನಂದನಾ ।

## ಪದ

ಸರ್ವ ವಿಷಯವತಿ ಜೇಷ್ಠವೇ ಬಲಿ ದಿಷ್ಟವೇ । ಮೃದು ಕಠಿಣ
ವೆನ್ನದೇ । ಹರಿಯಂಗಣದಿ ಲೋಟಾಂಗಣವನು ಹಾಕುತಲಿ
ತಾನು । ದೇವ ರೂಳಿಗದಿಂದೇ । ನೆರೆ ಹಡಪಿಗ ಪಾದುಕೆಯ
ವಾ ಯಂಬನಾಮವಾ । ತಾಳಿ ಕರಸಿ ಕೊಳ್ಳದೇ । ತರಳೆ
ತ್ಯಾಡಿಸುತಲಿ ತನ್ನಾ ಕಳೆ ದನುದಿನಾ । ಇದು ಯಾತರ ಛಂದಾ ।

## ಶ್ಲೋಕ ೮

ಪರೋಪಕಾರ ವಂಚನೆ ಮಾಡುವಾ । ಸುರಭಿ ಚಂದನ
ಮಿಂಚಿಲೆ ತೀಡುವಾ । ಶರೀರೋ ಬೆಚ್ಚಿನ ಮಾಟವೋ
ಮಂದನಾ । ಅರಿತು ಸಾರಿದ ಮಹಿಪತಿ ನಂದನಾ

## ಪದ

ಆಷಾಡ ಗೇಯಲಿ ಹಸಿವೆಯ ಬಲು ತೃಷಿವಿಯು ।
ಸಕಲನು ಕೂಲದಿಂದಾ । ಲೇಸಾಗಿ ನೈವೇದ್ಯ ವದಗಿಸಿ
ಹರಿಗರ್ಪಿಸಿ । ನಿಜ ತೀರ್ಥ ಪ್ರಸಾದಾ । ಭೂಷಣದಲಿ
ನಾನು ಕೊಳಲಿಲ್ಲಾ ಸುಖ ಬಡಲಿಲ್ಲಾ । ದೋಷದನ್ನವ
ಉಂಡು ವಡಲನು ನಾನು ಹೊರೆದನು ಬಯಸುತ
ಜಿವ್ಹ ಸ್ವಾದಾ

## ಶ್ಲೋಕ ೯

ವಿದಿತವಾದ ರಸ್ನಾವ ಉಂಬನು । ಮುದದಿ ತತ್ವದ
ವಿದ್ಯವ ತುಂಬನು । ಉದರೋಶಾಲ್ಮಲಿ ಫಲವೋ
ಮಂದನಾ । ಇದನು ಸಾರಿದ ಮಹಿಪತಿ ನಂದನಾ ।

## ಪದ

ಮನ ವಿಶ್ರಾವಣ ಸುಖ ಬೆರತಿದೇ ನೋಡು ನಿಂದಿದೇ ।
ಗುರು ಬೋಧಿಸಿದನು । ಮನನ ಮಾಡುತ ನಿಜಧ್ಯಾಸಾ ।
ಹಚ್ಚಿ ವಿಶೇಷಾ । ಪಡೆದು ಸಾಕ್ಷಾತ್ಕಾರವನು ।
ಚಿನುಮಯಾನಂದ ನೋಲಾಡದೇ ತಾಂ ಪೀಡಾಡದೇ ।
ನಾನಾ ಕೋಟಲಿಗಳನು । ಆನುಕರಿಸುತ ಬಲು ಬಳಲಿದ
ಅಲ್ಲಿ ತೊಳಲಿದ । ಹರಿ ವಲುಮೆ ಇಲ್ಲದೇನು ।

## ಶ್ಲೋಕ ೧೦

ವಿಷಯ ಚಿಂತನೆ ಮಾಡಲು ಸಂಭ್ರಮಾ । ಕುಸುಮ
ನಾಭನ ನೆನಿಯೆ ವಿಭ್ರಮಾ । ಕುಶಲ ಮಾನಸೋ
ಪಶುವೋ ಮಂದನಾ । ಸ್ವಸುಖ ಸಾರಿದ ಮಹಿಪತಿ ನಂದನಾ

## ಪದ

ಫಳಿಸಲು ಸುಕೃತ ಇದೇವೇ ಭಾದ್ರಪದವೇ । ನಡೆದ್ಹೋಗಿದ
ರಿಂದಾ ಒಲಿದ ಪುಣ್ಯ ಕ್ಷೇತ್ರವಾಗಿಹಾ ಸಂತರಾಲಯಾ ।
ಪುಗುವುದೇ ಯಾತ್ರೆ ಛಂದಾ । ಜಲಜಾಂಬಕನ ಮಹಿಮೆ
ಗಳುಂಟು ಅಲ್ಲಿ ಸುಖವುಂಟು । ತೊರೆದನು ಪುರವಿಂದಾ ।
ಸತಿ ಉದರದ ದಾವತಿಗಾಗಿ ತಿರುತಿರುಗೀ । ಜನುಮ
ಕಾಯಿತು ಕುಂದಾ

## ಶ್ಲೋಕ ೧೧

ಧನದ ಆಶೆಗೆ ನಡೆಡತಾಕುವಾ । ಘನ ಪ್ರದಕ್ಷಿಣೆ
ಮಾಡಲು ಬಳುಕುವಾ । ಮನುಜಪಾದವೋ
ಪಾದವೋಮಂದನಾ । ಅನುವ ಸಾರಿದ
ಮಹಿಪತಿ ನಂದನಾ

## ಪದ

ಪ್ರತಿ ಪದಾಶಿವಿಜಯಂಬುದೇ ಗುರು ಭಕ್ತಿಂದೇ ।
ಶೃತಿ ಯಥಾದೇವೇ ತಥಾಗುರೌ ಎಂದು ನುಡಿವುದು
ಅರ್ಥ ತಿಳಿದು । ನಂಬಿ ಭಜಿಸದೆವೆ । ಕ್ಷಿತಿಯೊಳು
ನರರೆಂದು ಬಗೆದೆವು ಹಿತ ಮರದೆವು । ಬಾಹ್ಯ ದೃಷ್ಟಿ
ನೋಡುವೇ । ಮತಿಗೆ ವದನಹೆಂದು ಸಿರಿಪ್ರಿಯಾ
ಇದು ನಿಶ್ಚಯಾ । ನಿಷ್ಟೆ ವಂದಿಲ್ಲದೆವೆ

## ಶ್ಲೋಕ ೧೨

ಸಕಲ ವೃತ ತಪ ತಿರ್ಥಾ ಶಾಸ್ತ್ರ ಪೌರಾಣ ಬಲ್ಲಾ ।
ಅಖಿಳದಿ ಫಲವೇನು ಶ್ರೀ ಗುರು ಭಕ್ತನಲ್ಲಾ ।
ನಿಖಿಳಾ ಭರಣಗಳಿದ್ದು ವ್ಯರ್ಥ ಮಾಂಗಲ್ಯವಿಲ್ಲಾ ।
ನಿಕಟವು ಗುರು ಮಹಿಪತಿ ಬೋಧದ ಸೊಲ್ಲಾ
ಇಂತು ಏಕಾರ್ತಿಕಾ ಮೀಸಲು ಮೊರೆಯಿಡಲು ।
ಗುರು ದಯವ ಮಾಡಿ ।
ಪಿಂತಿನ ತಪ್ಪವ ನೋಡದೇ ತಡ ಮಾಡದೇ ।
ಸಿರದಲ್ಲಾ ಭಯ ನೀಡಿ । ಅಂತರಂಗದ ಸುಖದೆಚ್ಚರಾ ಕೊಟ್ಟ
ಸುಸ್ಥಿರಾ । ಏನು ಪುಣ್ಯವೋ ನೋಡಿ । ಶಾಂತ ಮೂರುತಿ
ಗುರು ಮಹಿಪತಿ ಸುತ ಸಾರಥಿ । ನಾಮ ಬಿಡದೆ ಕೊಂಡಾಡಿ

11514

## ೭೪೦

## (ಕಾಲಜ್ಞಾನ)

ಅರ್ತುಕೊಳ್ಳರೋ ಹಿತವಾ ಜನರಿನ್ನು ।
ಮೈಯ್ಯವ ಮರಿಯ್ಥ ಬ್ಯಾಡಿರೋ ।
ಮರ್ತ್ಯದೊಳಗ ಕಲಿರಾಯ ನರಸುತನ ।
ಪ್ರಬಲ ವಾಯಿತು ಕೇಳಿರೋ ಪ

ಬೀಳು ಬಿದ್ದಾವೋ ಧರ್ಮದಾ ಭೂಮಿಯು ।
ಅಧರ್ಮವೇ ಹೆಚ್ಚೀತು ।
ಹೇಳಲಿನ್ನೇನವಗುಣಿಗಳು ಪ್ರಕಟಿಸಿ । ಕೇಡು ತಂದಾರು ಜಗಕೆ ।
ಖೂಳರ ಹಿರಿತನವು ಒಳ್ಳೆವರಾ ।ಮಾನ ಮನ್ನಣೆ ಹೋದಾವು ।
ಕೀಳು ಮಾತುಗಳಾಡಿ ಬಿಸಿ ನೀರು ಚಲ್ಲಿ ।
ಮನೆಯ ಕೊಂಡುಂಬುವರು ೧

ಸತಿಯರು ವೃತ ಗೆಟ್ಟಾರೋ ಪತಿಸೇವೆ ।
ಮರ್ಯಾದೆಗಳ ಬಿಟ್ಟಾರೋ ।
ಕೃತಕ ಕುಟಿಲ ದುಷ್ಟ ಬುದ್ಧಿಯಲಿ ಬಾಳುತ ।
ಕುಲಕ ಮಾತವ ತಾಹರು ।
ಪಿತನೊಳು ಗುರುಭಾವ ಹಿಡಿಯದೆ ।
ಮಕ್ಕಳು ಹಗೆ ಹಾರೋ ।
ಹುಸಿನುಡಿದು ಮನೆ ದೈವವನೇ ಮಾರಿ ।
ಹದಗೆಟ್ಟು ಹೋಗುವರೋ ೨

ಒಡಲು ಕಾಮಾಟಿಕೆಯಾ ಎರಡರಿಂದ ।
ಕೋಣ–ನಂದದಿ ಬಗಿದು ।
ಪಡಿ ಕೊಟ್ಟು ಸಲಹುವ ಒಡಿಯ ನೆಚ್ಚರ ವಿಲ್ಲಾ ।

ಮರಹು ಕತ್ತಲೆ ಮುಸುಕಿ ।
ಪೊಡವಿಲಿ ಭಕುತಿ ಮಾರ್ಗ ಮುಗ್ಗಿತು ।
ಎಲ್ಲ್ಯಾರಿದ್ದರ ಹೋಲಿಕೆಯು ೩

ಕಡಲ ಶಯನನ ದಾಸನೆಂದರೆ ಬಾಗರು । ನೀಚರಿಗೆರಗುವರು
ಕನ್ಯರೈದು ವರುಷಕ ಗಂಡನ । ಸಂಗವ ಬಯಸುವರು ।
ಇನ್ನೇನು ಏಳು ಬರುಷದ ಬಾಲೇರು ।
ಗರ್ಭವ ಧರಿಸುವರು ।
ಅಣ್ಣಾ ತಂಗಿಗೆ ಮದುವೆ ಮುಂದಕ ।
ಆದಾವೋ ಜಗದೊಳಗ ।
ಅನ್ನವು ಒಂದೇ ತಾವಿಲಿಯಲ್ಲಾ ಉಣುತಲಿ ।
ಜಾತಿ ಸಂಕರ ವಾಹುದು ೪

ಎರಡು ಸಾವಿರ ವರುಷಕೆ ದೇವಾಲಯ ।
ಯಾತ್ರೆಯು ನಿಲ್ಲುವವು ।
ಮರಳೈದು ಸಾವಿರ ವರುಷಕೆ ಭಾಗೀರಥಿಯ ।
ನೀರು ತೋರವಲ್ಲಿ ೫

ಎರಡೈದು ಸಾವಿರ ವರುಷಕೆ ಹರಿಕಥೆ ।
ಶಾಸ್ತ್ರಗಳು ಮರೆವುದು ।
ಹುಸಿಯಲ್ಲ ಗುರುವರ ಮಹೀಪತಿ
ಸಾರಿದಾ ಬೋಧವಿದು ೬

## ೭೪೧

ಕೇಳಿರೋ ಕೇಳಿರೋ ಆಲಿಸಿ ಜನರು ।
ಕಲಿಯುಗದೊಳಗ ಒಡಿಯ ನಾಟವನು ಪ

ಫುಲ್ಲನಾಭನ ಭಕ್ತಿ ಎಳ್ಳೆನಿತಿಲ್ಲಾ ।
ಹುಲ್ಲು ಕಲ್ಲು ದೈವಕ ಎರಗಿ ನಡೆವರು ।

ಬೆಲ್ಲವು ಕಹಿಯಾಗಿ ಸಿಹಿ ಬೇವಾಯಿತು ।
ಅಲ್ಲ–ಹುದೆಂಬುದು ಬಲ್ಲವರಾರು ೧

ಸಾಧು ಸಂಗಕ ಕಾಲು ಏಳುವು ನೋಡಿ ।
ಸಾಧಿಸಿ ದುರ್ಜನರಾ ನೆರಿಯ ಸೇರುವರು ।
ಮಾಧವ ನಾಮ ಉಣ್ಣಲು ಮುಖರೋಗ ।
ಭೂದೇವಿ ನಿಸ್ಸಾರವಾದಳು ನೋಡಿ ೨

ನೀಚರಿಗುದ್ಯೋಗ ಊಚರಿಗಿಲ್ಲ ।
ಆಚಾರ ಸದ್ಗುಣ ಆಡವಿ ಸೇರಿದವು ।
ಯೋಚಿಸಿ ಒಬ್ಬರಿ ಗೊಬ್ಬರು ಕೇಡಾ ।
ಭೂಚಕ್ರದೊಳು ಎಲ್ಲಾ ತೀರಿ ತಿಂಬುರೈಯಾ ೩

ಇಲಿಯು ಹೆಗ್ಗಣ ಹೆಚ್ಚಿ ತೋಳ ಬಡಿದು ।
ದಾಳಿಯಿಟ್ಟವು ಲಂಕಾ ಯೋಧ್ಯದ ನಡುವೆ ।
ಇಳಿಯೊಳು ಹತ್ತೆಂಟು ಕಾಲ–ವೀಪರಿಯಾ ।
ತಲಿ ತಲಿಗಿನ್ನು ನಾಯಕರಾಗಿ ಇರಲು ೪

ಮ್ಯಾಲೊಬ್ಬ ನಿಂದಲಿ ಸುಖದಲಿ–ರಲಿಕ್ಕೆ ।
ಕುಲ ಅನ್ಯ ಇಲ್ಲದ ರಾಜೇಶನಾ ।
ಕಾಲಿಲಿ ಸರ್ವ ಸಂಕರ ವಾಗುತಿರಲು ।
ಹೊಳೆವನು ಗುರುಮಹಿಪತಿ ಸುತ ಸ್ವಾಮಿ ೫

## ೭೪೨

ಕೇಳಿರೋ ಕೇಳಿರೋ ಆನಂದ ನುಡಿಗಳ ।
ಜಾಳಿಲಿ ದೋಷವ ಹರಿನಾಮ ನೆನೆಯುತ ।
ಕೇಳಿ ಕೇಳಿ ಕೇಳಿ ಕೇಳಿ ಪ

ಯುಗದಂತಿಲಿ ಸರ್ವ ಮತವೆಲ್ಲ ಕೆಡಲಾಗಿ ।
ಜಗದೋದ್ಧಾರ ಜಗದೀಶ ಬರು ತಾನೆ ೧

ಸ್ವ ಶಕ್ತಿ ಕುದುರೆಯ ನೇರಿ ರಾವುತನಾಗಿ ।
ಅಸಮ ಪೊನ್ನೀಟೆಯ ಹಿಡಕೊಂಡು ಬರುತಾನೆ ೨

ನಾಕು ವೇದಗಳೆಂಬಾ ಕುದುರೆಯ ಕಾಲವು ।
ಬೇಕಾದ ಅವಯವ ಆರು ಶಾಸ್ತ್ರಗಳಿವೆ ೩



ಮೂರು ಪೌರಾಣ ಶೃಂಗಾರಾಭರಣವು ।
ಶರಣವತ್ಸಲನೆಂಬ ಕಡಿವಾಣ ಕುದುರೆಗೆ ೪

ವಿವೇಕ ಹಲ್ಲಣ ಬೋಧ ಹಕ್ಕರಿಕೆಯು ।
ಭಾವಿಸೆ ಭೂ ಭಾಗವೆಂಬುದು ಪಾವುಡವು ೫

ಈ ಪರಿಯಿಂದಲಿ ಭೋರ್ಗರೆವುತ ಬರೆ ।
ತಾಪವಡಗಿ ಸುಖ ತಂಗಾಳಿ ಬಂದೀತು ೬

ತಾಯಿಯ ಧ್ವನಿ ಕೇಳಿ ಮಕ್ಕಳು ಬಹುಪರಿ ।
ಬಾಯ ದೆರವುತಲಿ ಜನಜಡಿ ಬಹುದು ೭

ಅವರಿ–ಗಭಯ ಕೊಟ್ಟು ಅಧರ್ಮವೇ ಕಿತ್ತಿ
ಯವನರ ಹಂತಿಯ ಕಟ್ಟಿ ತಾ ತುಳಿಸುವ ೮

ಹೊಟ್ಟವ ಹಾರಿಸಿ ಘಟ್ಟಿ ತಾ ಉಳಹುವ ।
ಸೃಷ್ಟಿಲಿ ಧರ್ಮ ಸಂ–ಸ್ಥಾಪನೆ ಮಾಡುವಾ ೯

ಮೊದಲಂತೆ ಜಗವನು ಸುಖದಲಿ ಇಡುವನು ।
ಮುದದಿಂದ ಸಾರಿದ ಗುರುವರ ಮಹಿಪತಿ ೧೦

## ೭೪೩

## ಆನಂದ ಲಹರಿ (ಪಾರಮಾರ್ಥ ಮುಖ್ಯದ ಹಾಡು)

ಗಿರಿಜೇಶ ಮನೋಜಾತಾ ಸುರಮುನಿಜನಪ್ರೀತಾ
ಕರುಣಾ ಸಾಗರ ಗಣನಾಥಾ ಜಗವದನಾ
ಚರಣಕೆ ಶರಣೆಂದು ಬಲಗೊಂಬೆ ಕೋಲೆ ೧

ಸಕಲಾ ಮುಖದೊಳು ಯುಕುತಿಯ ನುಡಿಗಳಾ
ಪ್ರಕಟದಿ ನುಡಿಸುವೆ ಜನನಿ ಸರಸ್ವತಿ
ಭಕುತಿಲಿ ಶರಣೆಂಬೆ ಕಲ್ಯಾಣಿ ೨

ಅಚ್ಯುತಾನಂತನೆ ಸಚ್ಚಿದಾನಂದನೆ
ನೆಚ್ಚಿದ ಶರಣರ ಸುರಧೇನುವೆ ಅವಧೂತಾ
ಎಚ್ಚರ ಕೊಟ್ಟು ಸಲಹಯ್ಯ ೩

ಕರಿಯಾ ಮೊರೆಯ ಕೇಳಿ ಭರದಿಂದೊದಗಿ ಬಂದು
ಕರದಿಂದಲೆತ್ತಿ ಸಲಹಿದೆ ಶ್ರೀಶಾ
ಚರಣವದೋರಿ ಕಾಯಯ್ಯ ೪

ಶರೀರ ಒಂದರಲಿದ್ದು ನರನಾರೀರೂಪದಲಿ
ಚರಿತವ ದೋರದೆ ಅನುಪಮ ಶಂಕರ
ಕರುಣಿಸು ಫಣಿಗಣ ಭೂಷಣಾ ೫

ಅಂಜನೀಸುತನಾಗಿ ಕಂಜನಾಭವ ಸೇವೆ
ರಂಜಿಸುವಂತೆ ಮಾಡಿದ ದೈತ್ಯರ
ಭಂಜನ ಹನುಮಂತ ಕರುಣಿಸು ೬

ಮೂರಾವತಾರಿಯಾಗಿ ಚಾರು ಚರಿತಗಳ
ತೋರಿದೆ ಜಗದೊಳು ಮುನಿರಾಯಾ ಸುಖತೀರ್ಥ
ತಾರಕ ಶರಣರ ನಿಜಗುರು ೭

ಮೇದನಿಯೊಳಗುಳ್ಳ ಸಾಧು ಸಂತರ ನಿಜ
ಪಾದಕ ಮನಿಸುವೆ ಅನುದಿನ ಜಗದೊಳು
ಸಾದರದಿಂದ ನೆನೆಯುತ ೮

ಶರಣವ ಹೊಕ್ಕರ ಕರುಣದಿಂದಲಿ ನೋಡಿ
ತರುಣೋಪಾಯವ ತೋರುವಾ ಮಹಿಪತಿ
ಗುರುರಾಯ ನಿನ್ನ ಬಲಗೊಂಬೆ ೯

ಕರುಣವಾಗಲು ಅವರ ಪರಮ ಮೂಕನಜ್ಜಿಹ್ವಾ
ಸುರಸ ಮಾತುಗಳ ಆಡೋದು ಹುಸಿಯಲ್ಲ
ಧರೆಯೊಳು ಅನುಭವವಿದು ೧೦

ಅವರಾಮಹಿಮೆಗಳ ವಿವರಿಸಿ ಹೇಳಲು
ಹವಣವೆಲ್ಲಿಹುದು ಮನುಜಗ ಭಕುತರು
ಅವನಿಲಿಬಲ್ಲರು ನಿಜಸುಖ ೧೧

ಏನೆದು ಅರಿಯದಾ ಹೀನ ಅಜ್ಞಾನಿಯು
ನ್ಯೂನಾರಿಸದೇ ಸಲಹಯ್ಯಾ ಮಹಿಪತಿ
ದೀನೋದ್ಧಾರಕಾ ಕರುಣಿಸು ೧೨

ಪದುಮನಾಭನ ಭಕ್ತಿ ಚದುರಾ ಮುತ್ತೈದೇರು
ಒದಗಿನ್ನು ಬನ್ನಿ ಹರುಷದಿ ಮುಪ್ಪದಾ
ಉದಿತಾ ನುಡಿಗಳ ಕೇಳಲು ೧೩

ವಿವೇಕಬೋಧಿಯಂತ ನಾವಕ್ಕತಂಗೇರು
ದೇವಗುರುರಾಯನ ಮಕ್ಕಳು ನಿಜಶಕ್ತಿ
ಭುವನದಿ ನಮ್ಮಾ ಹಡೆದಳು ೧೪

ಸುಜ್ಞಾನ ವೈರಾಗ್ಯ ಸಂಜ್ಞಧಿ ಮೆರೆವರು
ಪ್ರಾಜ್ಞರು ನಮ್ಮಣ್ಣಾ ತಮ್ಮರು ಹರಿಭಕ್ತಿ
ಮಜ್ಞರು ಅವರಿಗೆ ಸರಿ ಇಲ್ಲಾ ೧೫

ಭಕ್ತಿಯ ತೌರಮನಿ ಶಕ್ತಿಯ ಬಲದಿಂದ
ಯುಕ್ತೀಲಿ ನಾವು ಬರುತೇವು ಹರಿಭಕ್ತಿ
ಭೋಕ್ತರು ನೀವು ಬರಬೇಕು ೧೬

ದಿವ್ಯಾಂಬರವನುಟ್ಟು ಸುವಿದ್ಯಾ ಇಡಗಿಯು
ತೀವಿದರ ಅರಹು ಅಂಜನಾ ವನೆ ಇಟ್ಟು
ಸುವಾಸನೆಯ ಪುಷ್ಪ ಮುಡಿದಿನ್ನು ೧೭

ಈರೆರಡು ಭೇರಿಯ ಸಾರಿಸಿ ಎಡಬಲಕ
ಆರು ವಂದಣಾ ನಡಸೂತ ಕಹಳೆಗಳು
ಮೂರಾರು ಊದಿಸುತೆ ಬರುತೇವು ೧೮

ಸಾಧನ ನಾಲ್ಕರ ಕುದುರೆಯ ಕುಣಿಸುತ
ಒದಗಿದ ಪ್ರೇಮದ ಮದ್ದಾನಿ ಯೊಡಗೂಡಿ
ಚದುರೇರು ಮುಯ್ಯ ತರುತೇವು ೧೯

ಭಾವದ ಬಯಲಾಟ ಆವಾಗ ಆಡುತ
ಸಾವಧ ಮುಯ್ಯಾ ತರುತೇವು ನುಡಿಗಳ
ನೀವಾತ ಕೇಳಿ ಜನವೆಲ್ಲಾ ೨೦

ಮೆರೆವಾಭಿಮಾನಿಯು ಇರುವ ಸೋದರ ಮಾವ
ಅರಸಿ ವಿಷಯಯೆಂಬತ್ತೆರಯರ ಮನಿಗೀಗ
ಭರದಿಂದ ಮುಯ್ಯ ತರುತೇವು ೨೧

ರಾಯ ಅಭಿಮಾನಿ ಸಿರಿಯದ ಸಡಗರ
ನಾ ಏನ ಹೇಳಲಿ ಜಗದೊಳು ಪಸರಿಸಿ
ತಾ ಎಡ ಬಲವನು ನೋಡನು ೨೨

ಏಳು ಸುತ್ತಿನ ಗೋಡಿ ಮೇಲಾದ ಮನಿಗಿನ್ನು
ಸಾಲಾದ ಒಂಭತ್ತು ಬಾಗಿಲು ಚಲುವಾದ
ಮ್ಯಾಲಿಹ ಒಂದೊಂದು ಗಿಳಿಗಳು ೨೩

ಅಂಗಳ ಹೋಗಲಿಕ್ಕೆ ಕಂಗಳ ಲೇಸಕಂಡೆ
ಮಂಗಳವಾದ ಉಪ್ಪರಿಗೆ ಥರಥರ
ರಂಗ ಮಂಟಪ ನಡುವಂದು ೨೪

ಬಿಡದೆಂಟು ಕಂಬದಿ ಸಡಗರ ರಚಿಸಿದ
ಒಡನಿಹ ಚಾವಡಿರಾಯನ ಸೌಖ್ಯಕ
ಪೊಡವಿಲಿ ಸರಿಯಾ ಕಾಣೆನು ೨೫

ಎಂಟು ದಿಕ್ಕಿಗೆ ನೋಡೀ ಘಂಡೆಯ ಕಟ್ಟಿದ
ಎಂಟು ಆನೆಯಾ ಘಡಘಾಡಿ ತಲಿಯಲಿ
ಉಂಟಾದ ಗುರುತರದ ಅಂಕೂಶಾ ೨೬

ಬಿಡದೆಂಟು ಕಂಬದಿ ಸಡಗರ ರಚಿಸಿದ
ಒಡನಿಹ ಆನೆಯಾ ಘಡಘೂಢೀ ಥಳೀಐಳೀ
ಊಂತಾಧ ಘೂಖುಊಥೃಧ ಆಂಖೂಶಾ ೨೬

ಐದೈದು ಸಾಲಕ ಐದೈದು ಕುದುರೆಯು
ಐದೈದು ಭಂಟರು ಅದಕಿನ್ನು ಅನುದಿನ
ಮೈದಡುವುತಾ ಏರುವರು ೨೭

ಎತ್ತ ನೋಡಿದರತ್ತ ಸುತ್ತ ಓಡ್ಯಾಡುವ
ಹತ್ತು ಮಂದಿಯಾ ಆಪ್ತರು ಮನರಾಯಾ
ಒತ್ತಿ ಆಳುವ ಪ್ರಧಾನಿ ೨೮

ಅನುವಾದ ಗುಣತ್ರಯಾ ಅನುಜರು ಈತಗೆ
ಅನುಭವಿ ಒಬ್ಬ ಇದರೊಳು ಹರಿನಾಮಾ
ನೆನೆವನು ಅನ್ಯ ಹಂಬಲವಿಲ್ಲಾ ೨೯

ನಾಕಾವಸ್ಥೆಗಳೆಂಬಾ ನಾಕು ಒಳ ಮನೆಗಳು
ಇಕ್ಕಿಹದೊಂದು ಅದರೊಳು ಭಂಡಾರ
ಬೇಕಾದವರೆ ತೆರೆವರು ೩೦

ಈರಾಯ ನೈಶ್ವರ್ಯ ಆರು ಬಣ್ಣಿಸುವರು
ಆರೊಂದು ಮಂದಿ ಮಕ್ಕಳು ಹೆಸರಾದ
ಪರಿಯಾಯ ಕೇಳಿ ಹೇಳುವೆ ೩೧

ಮೊದಲು ಕಾಮ ಕ್ರೋಧವೊದಗಿ ಲೋಭಮೋಹ
ಮದಮತ್ಸರೆಂಬ ಬಾಂಧವರು ನಿಜ ತಂಗಿ
ವಿದಿತ ಅಜ್ಞಾನಿ ಶಕ್ತಿಯು ೩೨

ಬಂದು ಹೊರಗನಿಂತು ಒಂದು ಜಾವಾಯಿತು
ಮುಂದಕ ನಮ್ಮ ಕರಿಯಾರು ನಾವರಸಿ
ಕಂದಿದ ಮಾರೀ ತೋರಳು ೩೩

ಪಶ್ಚಾತಾಪವೆಂಬ ಬಿಚ್ಚಿ ಹಾಸಿಗೆ ಹಾಸಿ
ತುಚ್ಚರ ದೂರ ಝಾಡಿಸೀ ಬರುತೇವು
ಎಚ್ಚರ ಲೋಡಾ ತಂದಿರಿಸಿ ೩೪

ಈ ಕಲ್ಲ ಮ್ಯಾಲದ್ದು ಈ ಕಲ್ಲಿಗ್ಹಾರುವಾ
ತಾ ಕೋಡಗನಾ ಗುಣದಂತೆ ಭಾವಯ್ಯ
ಆ ಕಾಮಣ್ಣನ ಕರಿಯಾರೆ ೩೫

ಎಷ್ಟು ಉಂಡರ ದಣಿಯಾ ಎಷ್ಟು ಇಟ್ಟರ ದಣಿಯಾ
ಎಷ್ಟು ಉಟ್ಟರ ದಣಿಯಾನು ಕಾಮಣ್ಣ
ಎಷ್ಟು ಕೊಟ್ಟರ ದಣಿಯಾ ೩೬

ಒಳ್ಳೆವರರಿಯನು ಹೊಲ್ಲವರರಿಯನು
ಕೊಳ್ಳಿಕಾರನಾ ಮತಿಯಂತೆ ಭಾವಯ್ಯ
ನಿಲ್ಲರು ಈತನ ಇದರೀಗೆ ೩೭

ಈತನ ತಮ್ಮನು ಮಾತು ಮಾತಿಗೆ ಬಹಳಾ
ಖ್ಯಾತಿಯ ತಾನು ಪಡೆದಾನು ಕೋಪಣ್ಣ
ಆತನ ಮುಂದಕ ಕರಿಯಾರೆ ೩೮

ನೆಂಟರ ಅರಿಯನು ಇಷ್ಟರ ಅರಿಯನು
ಬಂಟರಾ ಮೊದಲೇ ಅರಿಯನು ತಪಸಿಗೆ
ಕಂಟರನಾದಾ ಈತನೇ ೩೯

ಥರ ಥರ ಕುಣಿವುತ ಘರ ಘರ ಹಲ್ಲು ತಿಂದು
ನೆರೆಮೋರೆ ಕೆಂಪು ಮಾಡುವಾ ಕೋಪಣ್ಣಾ
ಸ್ಮರಣೆಯಾ ತನ್ನ ಮರೆವನು ೪೦

ಕಂಡವರಿಗೆ ತಾನು ಕೆಂಡದ ನುಡಿಯಾಡಿ
ಖಂಡಿಸಿ ಬಿಡುವಾ ಗೆಳತನಾ ಕೋಪಣ್ಣ
ಹಿಂಡುವ ಹಿಡಿದು ಪ್ರಾಣವ ೪೧

ತಾನಾರೆ ಉಣ್ಣನು ಜನರಿಗೆ ಇಕ್ಕನು
ಜೇನಿನನೊಣದಾ ಗುಣದಂತೆ ಲೋಭೇಶಾ
ದೀನನ ಮುಂದಕ ಕರಿಯಾರೆ ೪೨

ಬಿಚ್ಚಾರುವಿಯನು ವೆಚ್ಚಮಾಡೆಂದಿಗೆ
ಬಚ್ಚಿಟ್ಟು ಹೂಳಿನೆಲದೊಳು ಲೋಭೇಶಾ
ಹುಚ್ಚಾಗಿ ಕಾಯ್ದಾ ಫಣಿಯಂತೆ ೪೩

ಕಾಸು ಹೋದಾವೆಂದು ಅಸುವ ಹೋಗುವವರಿ
ಕಾಸಾವೀಸಿಯಾ ಬಡವನು ಲೋಭೇಶಾ
ಹೇಸನು ಎಂದು ಮತಿಗೇಡಿ ೪೪

ಇಳೆಯೊಳೀ ಪರಿಯಲೀ ಗಳಿಸಿದ ಧನವನು
ಕಳೆದುಕೊಂಬರು ಅರಸರು ಕಡಿಯಲಿ
ಶೆಳೆದು ಕೊಂಡನು ಪುಗಸಾಟೆ ೪೫

ಇವರಿಂದ ಕಿರಿಯನಾ ಹವಣವ ನೋಡೀರೆ
ಅವಗುಣದ ರಾಶಿ ಜಗದೊಳು ಮೋಹಾಂಗಾ
ಅವನಾ ಮುಂದಕ ಕರಿಯಾರೇ ೪೬

ತಾಯಿ ತಂದೆಗಳ ನ್ಯಾಯನೀತಿಗಳಿಂದ
ಸಾಯಾಸದಿಂದ ಭಕ್ತಿಯ ಮಾಡದೆ
ಮಾಯದಾ ಬಲಿಗೊಳಗಾದಾ ೪೭

ಏನು ಬೇಡಿದುದೆಲ್ಲಾ ಪ್ರಾಣವವೆಚ್ಚಿಸಿ
ಮಾನಿನೀಯರಿಗೆ ಕುಡುವನು ಮೋಹಾಂಗಾ
ಮನವಿಡ ಒಳ್ಳೆವರ ಸೇವೆಗೆ ೪೮

ಲೆಕ್ಕ ವ್ಯವಹಾರವಾ ಲೆಕ್ಕದಿ ಮಾಡದೇ
ಮಕ್ಕಳಾಟಕಿಯ ಮಾಡುವಾ ಕ್ರೀಡೆಯಾ
ನಕ್ಕಾರೆಂಬ ಸ್ಮರಣೆಲ್ಲಾ ೪೯

ಕಮಲದ ವಾಸನೆಗೆ ಭ್ರಮರವು ಸಿಕ್ಕಿದ
ಕ್ರಮದಿಂದ ನೋಡಿ ಸೆರೆಯಾದಾ ಶ್ರೀವಧು
ರಮಣನ ನಾಮಾ ನೆನಿಯನು ೫೦

ತರುವಾಯದವನೀತಾ ದುರುಳನ ನೋಡಿರೆ
ಮರಳು ಬುದ್ಧಿಯಾ ಮದರಾಯಾ ಆತನಾ
ಸರಕು ಮಾಡುವಾ ಕರಿಯಾರೆ ೫೧

ಹೊರಸು ತೊಯ್ಯದಂತೆ ಭದ್ರನೆ ಬಿಗಿವನು
ಶರಣರ ಕಂಡು ಬಾಗನು ತಲೆಯನು
ಅರಿತವರಿಗೇನಾ ಹೇಳಲಿ ೫೨

ಬಗೆಯಾದೆ ಹಿತವನು ಪಗಡಿಪಂಚಿಗಳಾಡಿ
ಹಗಲಿನಾ ಹೊತ್ತುಗಳೆವನು ರಾತ್ರೀಲಿ
ಮುಗುಧೇಯರೊಡನೆ ಒಡನಾಟಾ ೫೩

ಕಣ್ಣಿಲ್ಲದಾನೆಯು ಚನ್ನಾಗಿ ತಿರುಗುತ
ಮುನ್ನ ಬತ್ತಿದಾ ಬಾವಿಯ ಬೀಳ್ವಂತೆ
ಕಣ್ಣೆದ್ದು ಕುರುಡನಾದನು ೫೪

ಉಂಟಾದ ಶ್ರೀಹರಿ ಬಂಟರಾ ಕಾಣುತಾ
ಗಂಟಕ್ಕಿ ಪಾದಕೆರಗನು ಮೋರೆಯಾ
ಒಂಟಿಹಾಂಗ ಮೇಲಕೆತ್ವಾ ೫೫

ಕೋಣನ ಮುಂದ ತಾ ವೀಣೆ ಬಾರಿಸಿದಂತೆ
ಜಾಣತನದಾ ನುಡಿಗಳು ತಿಳಿಯನು
ಪ್ರಾಣಿಗಳೊಳಗಧಮನು ೫೬

ಎಲ್ಲರಿಗೆ ಕಿರಿಯನು ಖುಲ್ಲರ ಗೆಳೆಯನು
ಬೆಲ್ಲಾ ಬಾಯೊಳು ಎದೆಯಲಿ ಕತ್ತರಿ
ಖುಳ್ಳ ಮತ್ಸರನಾ ಕರಿಯಾರೆ ೫೭

ಒಬ್ಬರ ಸುಖ ಕಂಡು ಉಬ್ಬಸಗೊಳುತಲಿ
ನಿಬ್ಬರ ಮಾತಾನುಡಿವುತಾ ಜಗದೊಳು
ಉಬ್ಬುವ ನೋಡೀ ನಿಂದೆಗೆ ೫೮

ಇವರಾ ಮಾತವರಿಗೆ ಅವರಾ ಮಾತಿವರಿಗೆ
ವಿವರಿಸಿ ಹೇಳಿ ಚಾಡಿಯಾ ಇದರಿಂದ
ಕವಡಿಯ ಲಾಭ ತನಗಿಲ್ಲ ೫೯

ಬೆಲ್ಲದೊಳಗಿಹ ಕಲ್ಲಿನಂದದಿ
ನಿಲ್ಲದೆ ವಿಷವಾ ಬೆರಸೀದಾ ಊಟದಿ
ಸಲ್ಲನು ಸಭೆಗೆ ಮತ್ಸರಾ ೬೦

ಇವರಿಗೆಲ್ಲಾರತಿ ತವಕದಿ ಬೆಳಗುವ
ಅವನಿಲಿ ತಂಗಿ ಅಜ್ಞಾನಿ ನಾದಿನಿ
ಹವಣವ ನೋಡುವ ಕರಿಯಾರೆ ೬೧

ಕತ್ತಲೆಯೊಳಗಿಹ ಮತ್ತ ಕಾಡಿಗೆಯಂತೆ
ಎತ್ತ ನೋಡಿದರು ನಿಜಬಣ್ಣ ನಾದಿನಿ
ಉತ್ತಮನೆರಿಯಾ ಹಿಡಿಯಾಳು ೬೨

ಪರಿಪರಿವಾಸನೆಯಾ ನೆರವ ಚಿತ್ತಾರ ನೋಡಿ
ನಿರಪೇಕ್ಷವೆಂಬ ಗಿಳಿ ಇಲ್ಲಾ ಬೋದಮ್ಯಾಲ
ಬರದೇನ ನಾಚಿಕೆ ಬಾರದ ೬೩

ಎಚ್ಚರ ಹಿಡಿದೊಮ್ಮೆ ಅಚ್ಯುತ ನಾಮವ
ಉಚ್ಚರಿಸಳೆಂದೂ ಮುಖದೊಳು ನಾದಿನಿ
ನಿಚ್ಚ ನೀಚರ ಸಂಗಮ ೬೪

ಮೊದಲೇ ತನಗ ಬುದ್ಧಿ ಒದಗಿಲ್ಲ
ಮುದದಿ ಹೇಳಿದರ ಕೇಳದೆ ದನದಂತೆ
ಉದಯಾಸ್ತ ಮಾನ ಕಳೆವಳು ೬೫

ತನ್ನ ತಾ ಮೈಮರೆದು ಅನ್ಯರ ಮುಸಖಾಕಿ
ಕಣ್ಣ ಕಾಣಿಸದಂದದಿ ಜನರನು
ಇನ್ನೂ ಮಾಡುತಲಿಹಳು ೬೬

ಪ್ರಧಾನಿಗುಣಗಳ ಒದಗಿನ್ನು ಹೇಳಲು
ಮೇದನಿಯೊಳು ಅಳವಲ್ಲಾ ಮನರಾಯಾ
ಮದದಿಂದಾತನ ಕರಿಯಾರೇ ೬೭

ಕುಂತಲ್ಲೆ ಕೂಡನು ನಿಂತಲ್ಲೆ ನಿಲ್ಲನು
ಭ್ರಾಂತತನದಿ ತಿರುಗುವ ಗಾಳಿಯಂತೆ
ಚಿಂತೀಗೆ ನೋಡೀ ಕಡಿ ಇಲ್ಲಾ ೬೮

ಪರಧನ ಪರಸತಿ ಪರನಿಂದೆ ಎಂಬುದು
ಶರೀರ ಸ್ವಭಾವಾ ಬಯಸೂದು ಆತನೆ
ಧರೆಯೊಳು ಹುಸಿಯು ಮನಿದೈವ ೬೯

ಹರಿಕಥೆಯಂದರೆ ಶಿರವ್ಯಥೆ ಹುಟ್ಟುದು
ಹರಿದಾಸರಂಗ ಸಂಗದಾ ಫಾಳಿಗೆ
ಉರಿದು ಬೀಳುವಾ ತಾಳಸು ೨೦

ಹರಿಕಥೆಯಲ್ಲಿಗೆ ಭರದೆಳೆ ತಂದರ
ಧರೆಯೊಳು ನೋಡಿ ತೂಕಡಿಸಿ ಬೀಳುವ
ಜರಟ ಮಾತಿಗೆ ಸಂಭ್ರಮಾ ೨೧

ಓದಿ ಕೇಳಿದರೇನು ವಾದ ಮಾಡುತಾ
ಸಾಧಿಸಿ ಹೆಮ್ಮೆ ಹಿಡಿದನು ಪರಗತಿ
ಹಾದಿಯ ಮರೆತಾ ಮನರಾಯಾ ೨೨

ಇವರ ಮಾತುಗಳೆಲ್ಲಾ ಹವಣವ ಹೇಳಲು
ಅವನೀಲಿ ಎಂದೂ ತೀರದು ಸಂತರೆ
ಅವರಿಗೆ ಮದ್ದು ಜಗದೊಳು ೨೩

ಘಟ್ಟುಳ್ಳವರ ಕಂಡು ಬಟ್ಟೆಯಾ ಹೋಗರು
ಹುಟ್ಟಿಹ ಬಡವಾ ಜನರನು ಕಂಡರೆ
ಹೆಟ್ಟಿ ಬಿಟ್ಟಿಯಾ ನಡೆಸುವರು ೨೪

ಕಂಡ ಮಾತುಗಳಾಡಿ ಬಂಡ ಮಾಡಿದರೇನು
ಮಂಡಲದೊಳು ಕೋಪವಾ ಹಿಡಿಬ್ಯಾಡಿ
ಕೊಂಡಾಡಿದೆವು ಗುಣಗಳಾ ೨೫

ಮುಯ್ಯುವ ತಂದಿರೆ ಬಾಯಿಯ ಮರೆವರೆ
ಹುಯ್ಯಲಿಡುತ ಹರಿನಾಮಾ ಜನರಿಗೆ
ನ್ಯಾಯನೀತಿಯನುಡಿಬೇಕು ೨೬

ಇವರಿಗೆ ಉಡುಗೋರೆ ತವಕದಿ ತಂದೀವಿ
ವಿವರಿಸಿ ನೀವು ಕೊಡಬೇಕು ತಾರತಮ್ಯ
ಹವಣವರಿತು ಸಂತರು ೭೭

ಸಮಭಾವ ಎಳೆಯಿಂದ ಕ್ರಮಗೊಂಡು ನೆಯ್ದಿಹ
ವಿಮಲತರದಾ ದುಕೂಲಾ ಅಭಿಮಾನಿ
ನಿಮಗಿದು ತುಂಬಾ ಉಡುಗೊರೆ ೭೮

ನವವಿಧ ಬಣ್ಣದ ನವಪರಿಯಾಗಿಹ
ಠವಠವಿಸುವಾ ಸಾರಳಿಯಾ ಸೀರೆಯಾ
ಆ ವಿಷಯಮ್ಮಗುಡುಗೋರೆ ೭೯

ಧರಣಿಯೊಳಗ ಸರ್ವ ವಿರತಿಯಿಂದ ದುದಿಸಿದ
ಮೆರೆವ ನಿಷ್ಕಾಮದ ಮುಕುಟವು ಕಾಮಯ್ಯ
ಹರುಷದಿ ಧರಿಸಬೇಕು ೮೦

ಶಮದಮ ಪ್ಯಾಟಿಯಾ ಅಮಿತ ಸರಕದೊಳು
ವಿಮಲ ಸುಶಾಂತಿಯಾ ಹಚ್ಚಡಾ ಕೋಪಣ್ಣಾ
ನಿಮಗಿದು ತಂದ ಉಡುಗೊರೆ ೮೧

ಶರಣರಾ ಮನೆಯಿಂದಾದರಿಸಿ ಬಂದಿದೆ ನೋಡು
ಪರಮೋದಾರೆಂಬ ಪದಕವು ಲೋಭೇಶಾ
ಕೊರಳಿಗೆ ಹಾಕಿಕೋಬೇಕು ೮೨

ಎರವು ಸಕಲವೆಂಬಾ ಅರಮನೆಯದೀ ಬಂದಾ
ಮೆರೆವಾ ನಿರ್ಮಮ ಒಡ್ಯಾಣ ಮೋಹಾಂಗಾ
ಧರಿಸಿಕೊಂಬುದು ಉಚಿತವು ೮೩

ಎಲ್ಲರಿಗೆ ಕಿರಿದೆಂಬಾ ಬಲ್ಲವರ ಪ್ಯಾಟಿಯ
ಒಳ್ಳೆವರ ಮೆಚ್ಚು ನಮ್ರವು ಮುದ್ರಿಕೆ
ಕೊಳ್ಳುದು ಉಚಿತ ಮದರಾಯಾ ೮೪

ಸಕಲವು ಹರಿಸೂತ್ರ ಯುಕುತಿ ಮನೆಯಿಂದಾದಾ
ನಿಖಿಳ ನಿರ್ವೈರಿ ಕಡಗವು ಮತ್ಸರಾ
ಪ್ರಕಟದಿ ಕೊಳ್ಳುದುಚಿತವು ೮೫

ಗುರುಪಾದ ನಿಷ್ಠೆಯಾ ಗುರುತಾಮಕುತಿಯಿದು
ಧರಿಸಿಕೊಂಬುದು ಅಜ್ಞಾನಿ ನಾದಿನಿ
ಹರುಷವಾದೀತು ಮನದಲ್ಲಿ ೮೬

ಮೇದಿನಿಯೊಳಗೊಂದು ಸಾಧು ಸಂಗತಿ ಎಂಬಾ
ಸಾಧಕ ವಾದಾ ಕವಚವು ಗುಣತ್ರಯ
ವಾದವರಿಗೆ ಉಡುಗೊರೆ ೮೭

ಸಾಧಕ ಪ್ಯಾಟಿಯಿಂದ ಸಾಧಿಸಿ ಬಂದಿದೆ
ಮಾಧವ ನಾಮಾ ಅಮೃತ ಕಳಶವು
ಪ್ರಧಾನಿ ಮನರಾಯ ಗುಚಿತವು ೮೮

ಪರಮಾರ್ಥ ಮುಯ್ಯುವ ಮೆರವುತ ತಂದೆವು
ಹರುಷ ಬಡುವಂತೆ ಸಂತರು ನೀವಂತಃ
ಕರಣದೊಳಿಟ್ಟುಕೋ ಬೇಕು ೮೯

ಭಾವದಿ ನುಡಿಗಳ ವಿವರಿಸಿ ನುಡಿದೆವು
ನಾವಿನ್ನು ಹೋಗಿಬರುತೇವು ವಿಶ್ರಾಂತಿ
ಶೀವಿದಾನಂದದ ಮನೆಗಿನ್ನು ೯೦

ಬಂದು ಸಭೆಯೊಳಗ ಚಂದ ನುಡಿರತ್ನಗಳಾ
ಇಂದು ಚೆಲ್ಲಿದೆವು ನಾವಿನ್ನು ಹರುಷದಿ
ನಿಂದವರೆಲ್ಲಾ ಬಳಕೊಳ್ಳಿ ೯೧

ಒಂದೆರಡು ಮಣಿಯಂದು ಸಂದೇಹ ಬಡಬ್ಯಾಡಿ
ಮಂದಿರದೊಳು ಇಡದಾವೆ ಹರುಷದಿ
ಬಂದು ಕೊಂಬರ ಕಾಣೆವು ೯೨

ಹಲವು ಕೇಳುವದ್ಯಾಕ ಹಲವು ಹೇಳುವದ್ಯಾಕ
ಸಾಲದೇ ಒಂದೇ ನುಡಿಯೊಳು ತಿಳಿವರೆ
ನೆಲೆ ನಿಜವಾದ ಅನುಭವಾ ೯೩

ಕೋಟ್ಯಾನುಕೋಟಿಗೊಬ್ಬ ಧಾಟಿಯ ಮುಯ್ಯುವ
ಸೂಟಿಯ ತಿಳಿದವನಿಹನು ಮುಕುತಿ ಕ
ಪಾಟ ದೊರೆಯಿತು ಅವನಿಗೆ ೯೪

ನೆರೆದವರೆಲ್ಲಾ ನಾವು ಅರಿತವರೆಂದೆನಿಸಿ
ಭರದಲಿ ಹೆಮ್ಮೆಯಾ ಹಿಡಿದರು ನೋಡಲು
ಹುರುಳಿಲ್ಲಾ ಅವರ ಅಜ್ಞಾನಕ ೯೫

ತಕ್ಕ ಸಭೆಯ ನೋಡಿ ಲೆಖ್ಖದಿ ನುಡಿದೆವು
ಮಿಕ್ಕ ಹಾಡುಗಳಾ ಕೆಲಸೇನು ಈ ಜನಕ
ಸಿಕ್ಕಿದೆ ಅನುಭವ ನಿಜಸುಖ ೯೬

ನೂರಕ ಒಂದೊಂದು ಸಾರಿದ ನುಡಿಯಾದಿ
ಚಾರಿಸಿಕೊಂಬುದು ನಿಜಸಹಿತ ಇದರಿಂದ
ನರಹರಿದಯಾ ಸಂಪೂರ್ಣ ೯೭

ಕೇಳಲಿ ಕೇಳದಿರಲಿ ಬಂದ ಜನಕೆಲ್ಲ
ಹೇಳಿದೇ ವಾಕ್ಯಾ ಗುರುವಿನಾ ಬರದವ
ತಾಳಿದ ಪರಿಯಲಿ ಇರಬೇಕು ೯೮

ಝುಮ್ಮ ನಾಡಿದ ನುಡಿ ಎಮ್ಮದೆನಲಿಬ್ಯಾಡಿ
ರಮ್ಯದೋರುವಾ ಪರಿಯಲಿ ನುಡಿಸಿದಾ
ನಮ್ಮಪ್ಪ ಮಹಿಪತಿ ಗುರುರಾಯಾ ೯೯

ವೀಣೆಯಾ ಬಾರಿಸುವಾ ವಾಣೀಯ ಲಾಘವ
ವೀಣೆಯ ಕಾಷ್ಟದಿ ಗುಣವೇನು ಎನಕೈಯ್ಯ
ಜಾಣನುಡಿಸಿದಾ ಗುರುರಾಯಾ ೧೦೦

ಕಂಭ ಸೂತ್ರದೊಳಿಹ ಬೊಂಬೆಯು ಕುಣಿದಂತೆ
ಇಂಬಾಗಿ ನಮ್ಮ ಗುರುತಕ ಮಾಡಿದಾ
ನಂಬಿದವರ ಕಾವಾ ಮಹಿಪತಿ ೧೦೧

ಇಂತು ಹಾಡಿದ ಮ್ಯಾಲ ಭ್ರಾಂತತನವನೀಗಿ
ನಿಂತರು ಸುಮ್ಮನೆ ನುಡಿಯದೆ ಅಜ್ಞಾನಿ
ಅಂತರಂಗದಿ ಯೋಚಿಸಿ ೧೦೨

ಸುಮತಿಯಂಬಾಪ್ತಳು ತಮಗಿಂತ ಕಿರಿಯಳು
ನಮಿಸಿ ಆಕೆಯ ಕರೆತಂದು ಮುಂದಮಾಡಿ
ಕ್ರಮದಿಂದ ಯಲ್ಲಾರು ಕುಳಿತರು ೧೦೩

ಅಧ್ಯಾತ್ಮ ವಿದ್ಯದಾ ಶುದ್ಧ ಕುಂಕುಮ ಗಂಧ
ಬದ್ಧಾದ ನೇಮದ ವೀಳ್ಯವ ನೇ ಕೊಟ್ಟು
ಬುದ್ಧೀಲಿ ಆರತಿ ಎತ್ತಿದರು ೧೦೪

ಉಡುಗೊರೆ ನೀವ ತಂದದ್ದಿಡಿಯಲು ನಮ್ಮ ಗುಣ
ಪೊಡವಿಲಿ ಮಾನ್ಯಕ ಬಂದವು ನಾಮ ನಿಮ್ಮ
ಒಡಲಹೊಕ್ಕೆವು ಕೂಡಿಕೊಳ್ಳಿ ೧೦೫

ನಿಮ್ಮ ನಮ್ಮ ಹಾಡ್ಗಳೆಲ್ಲಾ ಬ್ರಹ್ಮೋಪದೇಶ ಮುದ್ದಿ
ಝುಮ್ಮನೆ ತಿಳಿದವಗಾನಂದಾ ನೀವುದು
ನಿಮ್ಮನುಭವ ಬಂದೀತು ೧೦೬

ಪರಮಾರ್ಥ ಮುಯ್ಯವ ಮೆರೆವುತ ತಂದೇವು
ತರಿಸಿ ನೀವು ಕುಡಲಿಕ್ಕೆ ನಿಮಗಿನ್ನು
ಧರೆಯೊಳು ಶಕ್ತಿ ಸಾಲದು ೧೦೭

ಬಂಗಾರ ಇಡಗಿಗೆ ಸಂಗವೇ ಕಬ್ಬಿಣ
ಇಂಗಿತವಲ್ಲ ನಿಮ್ಮ ಯುಕ್ತಿ ನಾವೀಗ
ರಂಗನ ಒಲುಮೆ ಉಳ್ಳವರು ೧೦೮

ಸಾದರ ವಿವೇಕಿ ಬೋಧಕ್ಕತಂಗೇರ
ಪಾದಕ ನಮಿಸಿ ಭಕುತೀಲಿ ಬೇಡಿದರು
ಮಾಧವನ ಸ್ಮರಣೆಯಾ ಅನುದಿನಾ ೧೦೯

ನೆನವಿಗೆ ಒಮ್ಮೆ ಬಂದು ಅನುವುದೋರಲಿ ಬೇಕು
ಅನುದಿನವೆಂದು ವರವನು ಬೇಡಿದರ
ಘನದಯದಿಂದ ಕೊಟ್ಟರು ೧೧೦

ಅವರಿಗಭಯ ಕೊಟ್ಟು ತಾವು ನಡೆದರು
ಶ್ರೀವಧುವರನಾ ಪಾಡುತ ನಲಿಯುತ
ಅವರು ಬಂದರು ಸ್ವಸ್ಥಳಕೆ ೧೧೧

ತಂದೆ ಮಹಿಪತಿ ನಂದನ ಸಾರಥಿ
ಎಂದೆಂದು ನಿಮ್ಮ ಸ್ಮರಣೀಯ ಕೋಲೆ ದತ್ತಾತ್ರಯ
ಛಂದದಿ ಕೊಡಬೇಕು ನಮಗಿನ್ನು ॥೧೨

ಆವನು ಕೇಳುವ ಆವನು ಹೇಳುವ
ಭಾವದಿಂದಲಿ ಇಳೆಯೊಳು ಅವರಿಗೆ
ಕಾವನು ಶ್ರೀ ಹರಿ ದಯದಿಂದ ॥೧೩

ಆನಂದ ಲಹರಿಯು ತಾನಾದ ನಾಮವು
ಸ್ವಾನುಭವದಾ ಪರಮಾರ್ಥ ಮುಯ್ಯುವ
ಮಾನವರೆಲ್ಲಾ ತಿಳಿಕೊಳ್ಳಿ ॥೧೪

ಸುಭಾನು ಸಂವತ್ಸರ ಆ ಭಾದ್ರಪದಮಾಸ
ಶುಭವಾರ ದಶಮೀ ಗುರುವಾರ ದಿನದೇವ
ಪ್ರಭುವಿನ ದಯದಿಂದ ಸಂಪೂರ್ಣ ॥೧೫

## ವಚನಗಳು

### ೭೪೪

ಬಲ್ಲೆ ಬಲ್ಲೆನೆಂಬರು ಬಲ್ಲವಿಕಿ ಕೀಲು ಮರೆವರು ।
ಬಲ್ಲವಿಕಿ ಮಾರ್ಗವ ಮೆಚ್ಚಿ ಬಲ್ಲರಕೂಡ ಶಣಸುವರು ।
ಮಂಡೆಗೆ ಬೂದಿ ರುದ್ರಾಕ್ಷವನಿಟ್ಟು
ದಿಂಡೇರು ಶಿವಭಕ್ತರೆಂದು ಹೆಮ್ಮಲಿ । ಕಂಡ ಜಾತಿಗಳಲಿ
ಕೊಳವಮೆದ್ದು । ಜೊಂಡು ಗಡ್ಡವ ಬಿಟ್ಟು । ಮಿಂಡೇರ
ಘಲ್ಲಿಸುವ ತುಂಡವರೆತ್ತ ಶಿವಶರಣರೆತ್ತ । ಆ ಮೊಂಡ
ರೆಳೆದೊಯ್ದು ತುಂಡಿಸಿ ಮೂಗನು ಭಂಡ ಸಾಸಿವೆಯ ತುಂಬಿ
ದಂಡಿಸುವಾ ಯಮನೇ ಗುರುಜಂಗ ಮನಯ್ಯಾ ಮಹಾಗುರು
ಮಹಿಪತಿರಾಯ ನಂದನ ಪ್ರಭುವೇ

## ೭೪೫

ಬರಲು ಹಾರುವ ಮನೆಗೆ ಮೊರೆವರಯ್ಯಾ ಭವಿಯಂದು
ಅರಿಯರು ಭವಿಯಾರೆಂಬುದನು । ಶರೀರದೊಳು
ಖೋಯಂದು ಕೂಗುತ ಇರುವ ಲಿಂಗ ಕಾಣದವ ಭವಿ ।
ಹರದೊಡ್ಡವನೆಂದು ಹರಿಯ ನಿಂದಿಸುವನೇ ಭವಿ ।
ಧರಿಯೊಳು ಭವಿಗಳು ತಾವಾಗಿ । ಪರರಿಗೆ ಭವಿಯಂಬವಗ
ನರಕ ತಪ್ಪದಯ್ಯಾ ಮಹಾಗುರು
ಮಹಿಪತಿರಾಯ ನಂದನ ಪ್ರಭುವೆ ೭

## ಕೃಷ್ಣದಾಸರ ಮಕ್ಕಳು ಮೊಮ್ಮಕ್ಕಳಿಂದ ರಚಿತವಾದ ಕೀರ್ತನೆಗಳು

## ೭೪೬

ಕರುಣದಿ ಪಾಲಿಸೆನ್ನನು । ಶ್ರೀಕಾಂತಾ ಪ

ನಂದಸನಕ ಪಾಲಕ । ನೀಲಾಳಕಾ ।
ನಂದಗೋಪನ ಬಾಲಕಾ ।
ಸಿಂಧುರ ಮುಖವರ ಸಿಂಧುರ ನತಪದ ।
ಸಿಂದು ಶಯನ ಭವ ಸಿಂಧು ತರಿಸುತಾ ೧

ರಾಜಶೇಖರ ಪೂಜಿತಾ । ವಿರಾಜಿತಾ ।
ರಾಜೀವ ಪದರೀಜಿತಾ ।
ರಜ ರಾಜ ದ್ವಿಜ ರಾಜಗಮನ ಹರಿ ।
ರಾಜತಲ್ಪ ಉಡುರಾಜ ಕುಲಮಣಿ ೨

ಗಿರಿಧರ ಸುತ ರಕ್ಷಣ । ಕರುಣೇಕ್ಷಣಾ ।
ಗಿರಿಕರ ಸುವಿ ಚಕ್ಷಣಾ ।
ಗಿರಿಧರಜಾಪತಿ ಗಿರಿಸಮೃತತುರಗ ।
ಗಿರಿಮಂದಿರ ಕೃತ ಗಿರಿಪುಜಸಖಾ ೩

## ಅಂಕಿತ–ಗಿರಿಧರಸುತ

### ೭೪೭

ಕರುಣಿಸಯ್ಯ ದಯವಾರಿಧಿ ಮಹಾರಾಯಾ ।
ಗುರುಮಹೀಪತಿರಾಯಾ ।
ತರಳನು ನಾ ವರ್ಣಿಸುವೆನು ತವ ಚರಿತೆಯಾ ।
ಕೊಡು ಎನಗೆ ಸುಮತಿಯಾ ಪ

ಜನಿಸಿದೆ ಮೊದಲು ವಿಜಾಪುರದಲಿ ನೀನು ।
ಭಕ್ತರ ಸುರಧೇನು ।
ಜನರೊಳೆನಿಸಿ ಕೋನ್ಹೇರಿರಾಯನಮಗನು ।
ಐಗಳಿ ವೃತ್ತಿಯನು ।
ಮನಕೆ ತಾರದೆ ಘನ ವ್ಯಾಪರವನು । ಮಾಡುತ ಭಾಗ್ಯವನು ।
ಅನುಭವಿಸುತಲಿರೆ ಸುತರಾಪೇಕ್ಷೆಯನು ।
ಮಾಡಲು ತಿಮ್ಮವ್ವನು ೧

ಸಾರವಾಡವೆಂಬುವ ಗ್ರಾಮದಲಂದು ।
ಭಾಸ್ಕರ ಮುನಿ ಬಂದು ।
ಧಾರುಣಿ ಜನರುದ್ಧರಿಸಲಲ್ಲೆ ನಿಂದು । ಇರಲು ದಯಾಸಿಂಧು ।
ನಾರಿಶಿರೋಮಣಿ ದರುಶನಕ್ಕೆ ತಂದು । ನೀನೆ ಗತಿಯೆಂದು ।
ಆರು ತಿಂಗಳಾರಾಧಿಸೆ ಸಲಹೆಂದು । ದೀನಜನ ಬಂಧು । ೨

ಪತಿವ್ರತೆಗೆ ನುಡಿದನು ಶ್ರೀ ಮುನಿನಾಥಾ ।
ಸತಿಪತಿಗಳ ಚಿತ್ತಾ ।
ಪ್ರೀತಿಯೊಳೊಂದಾಗಲು ಕಾಮ್ಯವು ತ್ವರಿತಾ ।
ಆಗುದು ಎನೆ ವನಿತಾ ।
ಆತುರದಿಂದ್ಯೆ ದ್ವಂದಿಸಿ ಗಮನಿಸುತಾ ।
ನಮಿಸಲು ಗುರುತಾತ ।
ಆತರಿದನು ತವ ಮುಖವನು ಈಕ್ಷಿಸುತಾ ಪಕ್ವಾಫಲವೆನುತಾ ೩

ಮಂದಹಾಸದಿಂ ನುಡಿದನು ನಿಜಗುಟ್ಟು । ವ್ಯಾಪಾರವ ಬಿಟ್ಟು ।
ಚಂದದಿ ಯಾಚಕ ವೃತ್ತಿಲಿ ಮನನಟ್ಟು । ಎನೆ ಸಮ್ಮತ ಬಟ್ಟು ।
ಮಂದಿ ಕುದುರಿಗೆಲ್ಲರಿಗಪ್ಪಣೆ ಕೊಟ್ಟು । ನಿಲ್ಲದ್ದರುಷ ತೊಟ್ಟು ।
ಮುಂದಕೆ ಕರೆಯುತ ಶಿರದಲಿ ಕರವಿಟ್ಟು ।
ಉಪದೇಶವ ಕೊಟ್ಟು ೪

ಯೋಗಧಾರಣದ ಕೀಲವ ದೋರಿಸಲು । ದೂದಿಯವೋಲ್ ।
ಆಗಲೆ ದೊರಕಿತು ಮನನೆಲೆಗೊಳ್ಳಿಸಲು ।
ನಾನಾ ಬಯಕೆಗಳು ।
ತ್ಯಾಗವ ಮಾಡುವ ಅನ್ನ ಉದಕಗಳು । ಕ್ಲಪ್ತಕೆ ನಿಲ್ಲಿಸಲು ।
ಸಾಗಲು ಮುಂದಕೆ ಪರಿಪರಿಸಿದ್ಧಿಗಳು ।
ಮುಗಿದವು ಹಸ್ತಗಳು ೫

ನಾಲ್ಕು ಆರುದಶ ದ್ವಾದಶ ಷೋಡಶದಾ ।
ಭ್ರೂಮಧ್ಯದ್ವಿದಳದಾ ।
ಆ ಕಮಲವ ಮೆಟ್ಟುತ ಕಾಶಿಯ ಮುಖದಾ ।
ದ್ವಾರವ ತ್ಯಜಿಸುತ್ತಾ ।
ತ್ರಿಕುಟ ಶ್ರೀಹಟ ಗೋಲ್ಲಟ ಗೋಪುರದಾ । ನೋಡುತ ಸಂಭ್ರಮದಾ ।
ಸೋಂಕೆಳೆ ಗುಂಫದೊಳಾಡಿ ಸಾಸಿರದಳದಾ ।
ಪಂಕಜದೊಳಗಿದ್ದ ೬

ನಿರುಪಮ ನಿರ್ಗುಣ ನಿತ್ಯ ನಿರಂಜನಾ ।
ಪ್ರಭೆಯು ಅನುದಿನಾ ।
ಹರಿಶಶಿಕೋಟಿ ಪ್ರಕಾಶ ಭಾಸುವದನಾ ।
ಕಾಣುತ ಸಂಪೂರ್ಣಾ ।
ಕೊಟ್ಟು ಪಶ್ಚಿಮದ ಮಾರ್ಗದ ಸಂಧಾನಾ ।
ತಿಳಕೊಂಡ್ಯೋ ಪ್ರವೀಣಾ ।
ಎರಡು ಹಾದಿ ಸುಲಭವಾಯಿತು ಗುರುಕರುಣ ।
ದಿಂದಲೇ ಭಯಹರಣಾ ೭

ಹನ್ನೆರಡು ವರುಷಕೆ ಮುಗಿವಂಥಾ ಯೋಗಾ ।
ಅಂತಹದು ಬೇಗ ।
ಹನ್ನೊಂದು ತಿಂಗಳಿಗಾಯಿತು ವಿನಿಯೋಗಾ ।
ನೋಡೆಂದನು ಅನಘಾ ।
ಎನ್ನ ನಿನ್ನ ಸಂತತಿ ಸಂಪತೌಘಾ ।
ನಿನ್ನಲ್ಲೇ ಈಗಾ ।
ಉನ್ನತವಾಗುವ ದೆಂದ್ಹರಿಸಿದನಾಗ ।
ದುಷ್ಕೃತ ತರುನಾಗಾ ೮

ಧರೆಯೊಳು ತವಕೀರ್ತಿಯು ಬಹು ವಿಸ್ತಾರಾ ।
ಆಗುದು ನಿರ್ಧಾರಾ ।
ಕರವುತ ತಿಮ್ಮವ್ವನ ಕರೆದಿತ್ತವರಾ ।
ನಿನ್ನುದರದಿ ಕುವರಾ ।
ಬರುವನು ಡೋಣಿ ಶಿವಾಜಿ ಎಂಬ ಶೂರ ।
ಸಂಶಯ ಬಿಡು ಅದರಾ ।
ಹರುಷದಿ ಕಳುಹಿದ ಪರಸುತ ಉಭಯತರ ।
ಭಕ್ತರ ಸಹಕಾರಾ ೯

ಮುನಿವರನಾಜ್ಞೆದಿ ಸ್ವಸ್ಥಾನಕೆ ಬರುತಾ । ಕೆಲ ದಿವಸಲ್ಲಿರುತಾ ।
ಮನೆಯೊಳು ಯೋಗವಮಾಡುತ ಅನವರತಾ ।
ಸತ್ಪುರುಷರೆನಿಸುತಾ ।

ಜನರಿಂದಲಿ ಬಹು ಆರಾಧಿಸಿಕೊಳುತಾ ।
ಇರಲು ದಯವಂತಾ ।
ಅನಿತರೊಳರಿದೆ ನೀ ಆ ನಗರಕೆ ತ್ವರಿತಾ ।
ವೇಧಿಯು ಬಂತೆನುತಾ ೧೦

ಅಂತರಂಗದಲಿ ತಿಳಿಯತಲಾಗ್ರಾಮ । ತ್ಯಜಿಸಿದೆ ನಿಸ್ಸೀಮಾ ।
ಸಂತಸದಲಿ ಶಹಪೂರಕ್ಹೋಗುತ
ಧಾಮಾ ಮಾಡಿದೆ ನಿಷ್ಕಾಮಾ ।
ಸಂತರು ತವದರುಶನಕೈದರು ನೇಮಾ ।
ಬಟ್ಟರು ಬಹುಪ್ರೇಮಾ ।
ಸಂತತ ಪೂಜಿಸಿದರು ತವಬುಧಸ್ತೋಮಾ ।
ಗುರುಸಾರ್ವಭೌಮಾ ೧೧

ಅಲ್ಲಿ ಮೂರು ಸಂವತ್ಸರ ಇರಲಾಗಿ । ಶರಣ್ಣಾಳಿಯು ಬಾಗಿ ।
ಇಲ್ಲಿ ನೀವು ದಯಮಾಡುವದೊಳಿತಾಗಿ । ಸರಿ ಬಾರದಾಗಿ ।
ಅಲ್ಲಿಂದ ಪಯಣವಮಾಡುತ ಪಥಸಾಗಿ ।
ಬಂದ್ಯೋ ಮಹಾತ್ಯಾಗಿ ।
ಮೆಲ್ಲನೆ ಕಾಖಂಡಕಿ ಸ್ಥಳಕನುವಾಗಿ ।
ಬರಲು ವರಯೋಗಿ ೧೨

ಪುರದೊಳಗಿನ ಭಕ್ತರು ಬರುತಲಿ ನಮಿಸಿ ।
ಕರೆದೊಯ್ದರು ಸ್ತುತಿಸಿ ।
ಕರಣಿಕ ತನ್ನಯ ಸ್ಥಳದಲಿ ಗೃಹ ರಚಿಸಿ । ಕೊಡಲಂಗೀಕರಿಸಿ ।
ಹರುಷದಿ ವರಭಾಸ್ಕರ ಮುನಿಕರ ಸರಿಸಿ । ರುಹಜಾತನೆನಿಸಿ ।
ಇರುತಿರೆ ತೋರಿತು ಸಂತತಿ ಉದ್ಭವಿಸಿ । ಗುರುವಾಕ್ಯಫಲಿಸಿ ೧೩

ಆರಿಂದಾಗದು ನೈರಾಶ್ಯಾಚಾರಾ । ನಡೆಸಿದೆ ಗಂಭೀರಾ ।
ಧಾರುಣಿ ಜನರಿಂದಧಿಕೃತ ಸಂಸಾರ । ಜಲ ಪದ್ಮಪ್ರಕಾರಾ ।
ಸೇರಿದೆ ಅನುದಿನ ವೈರಾಗ್ಯದಾಗರಾ । ಸಂಪತ್ತು ಅಪಾರಾ ।
ತೋರಿದೆ ಲೋಕದಿ ನಟಪುರುಷ ವಿಚಾರಾ ।
ತಿಳಿದ್ಯೋ ಸುಕುಮಾರಾ ೧೪

ಕೊಟ್ಟರ್ದಿಡಿಯಲಿಲ್ಲ ಓರ್ವರ ಧನವು । ಪೂರ್ವದ ಸಂಗ್ರಹವು ।
ಮುಟ್ಟಲಲ್ಲೇ ವ್ರಯವಾಗುತಿಹುದು ಧನವು ।
ಸತಿಸುತ ಪರಿವಾರವು ।
ಬಿಟ್ಟಗಲದೆ ಸೇವೆಯ ಮಾಡುವ ಜನವು ।
ಭಕ್ತರ ಸಮುದಾಯವು ।
ದಟ್ಟಿಸಿ ಮನೆಯೊಳಗಾಗುದು ಪ್ರತಿದಿನವು ।
ಮೃಷ್ಟಾನ್ನ ಭೋಜನವು ೧೫

ತುಕ್ಕವ್ವಳು ನಿಮ್ಮತ್ತಿಗೆ ಭಾವಿಕಳು । ಪ್ರೀತಿಯ ಶೇವಕಳು ।
ಫಕ್ಕನೆ ವಿನಯದಿ ಮೃದು ಮಾತಾಡಿದಳು ।
ಸತ್ಪುರುಷರಿಳೆಯೊಳು ।
ಅಕ್ಕರದಲಿ ದೋರುವರು ಶಿದ್ಧಿಗಳು ನೀವೇನಿಲ್ಲೆನಲು ।
ನಕ್ಕು ನುಡಿದು ಒಂದಿನದ ತಪಸ ಕೊಡಲು ।
ಆದೀತೆಂದೆನಲು ೧೬

ಒಮ್ಮೆ ತೋರಿಸುವದೆನುತಲಿ ನಮಿಸಿರಲು ಮರಡೆಪ್ಪನ
ಸೊಸಿಯೊಳು ।
ತಮ್ಮಯ ಸದನದಿ ಅಸುವನೆ ತೊರೆದಿರಲು ।
ತುಕ್ಕವ್ವ ತಿಳಿಸಲು ।
ನಿಮ್ಮ ಶಾಠಿ ಕೊಡಲೊಯ್ಯುತ ಮುಸಕಿಡಲು ।
ಕೈಯ್ಯನೆಳೆಯಲು ।
ಝುಮ್ಮನೆ ಏಳುತ ಶಿಷ್ಯಳು ಎರಗಿದಳು ।
ನೋಡುತ ಬೆರಗಾದಳು ೧೭

ಲೋಕವನುದ್ಧರಿಸಲು ನೀನವತರಿಸಿ । ಜಡದೇಹವ ಧರಿಸಿ ।
ಲೋಕದಿ ಶರಣರ ಮನೋರಥ ಪೂರೈಸಿ ।
ಕೊಟ್ಟ್ಯೋ ಗುಣರಾಶಿ ।
ಈ ಕಲಿಯುಗದೊಳು ನಿರ್ಲಿಪ್ತನು ಎನಿಸಿ ।
ಕೊಂಡ್ಯೋ ಸುಖವಾಸಿ ।

ಭೋ ಕರುಣಿಯೆ ನರನೆಂದವ ದೋಷಿ ।
ಬಹು ನರಕದ ವಾಸಿ ೧೮

ಜಗದೊಳಗಿಹ ಶಿದ್ಧರ ಮುಕುಟದ ಮಣಿಯೇ ।
ಸಾಧಕರೊಳಗೆಣೆಯೆ ।
ನಿಗಮಾಗಮದಿ ನೀನಧ್ಯಾತ್ಮದ ಖಣಿಯೆ ।
ದುರಿತಾಂಧ ದ್ಯುಮಣಿಯೆ ।
ಮಿಗೆ ಭಾವದಿ ಮೊರೆಹೊಕ್ಕವರ ಋಣಿಯೇ ।
ಕುಹಕರಿಗೇನ್ಹೊಣೆಯೆ ।
ಪೊಗಳಲಾಪೆನೆ ನಿಮ್ಮನು ನಾ ಮನದಣಿಯೇ ।
ವರಸತ್ವದ ಗುಣಿಯೆ ೧೯

ಕಾಲ ತಪ್ಪಿಸುವದೇನ್ಯೆ ನಿಮಗರಿದೆ । ಮನದೊಳು ನೀನರಿದೆ ।
ತಾಳಿದ ದೇಹವ ಸಾಕೆನುತಲಿ ಜರಿದೆ । ಚಿದ್ರೂಪವ ಬೆರೆದೆ ।
ಭೂಲೋಕದಿ ವೃಂದಾವನದೊಳು ಮೆರೆದೆ ।
ಬಹು ಭಕ್ತರ ಪೊರೆದೆ ।
ಪಾಲಿಸುವನು ಶ್ರೀಪತಿ ತನುಜನ ಬಿಡದೆ ।
ತಡಮಾಡಗೊಡದೆ ೨೦

## ಅಂಕಿತ–ಶ್ರೀ ಪತಿ ತನುಜ

## ೭೪೮

ಕರುಣಿಸೋ ಹರಿ ನಿನ್ನವ ನೆನಿಸೋ ।
ಸಿರಿಪತಿ ತವ ನಾಮಾಮೃತ ಫಲನುಣಿಸೋ ಪ

ನಿನ್ನ ದಾಸರ ಸಂಗವನುದಿನ ಬಲಿಸೋ ।
ಘನ ವಿಚಾರಕ ಮನವೆನ್ನ ನಿಲಿಸೋ ೧

ಮಂಗಳಂಘ್ರಿಯ ಕುಂಬ ಕಂಗಳದೆರಿಸೋ ।
ರಂಗಭಕುತಿ ಅಂತರಂಗ ದೆಚ್ಚರಿಸೋ ೨

ಜನುಮಕ ಬಹಭವ ಪರಿಹರಿಸೋ ।
.................................................. ೩

## ೭೪೯

ತಮ್ಮ ಮಾತಿನರಹು ತಮಗಿಲ್ಲಾ ।
ಸುಮ್ಮನಾಡುತಲ್ಯೆದ ಜಗವೆಲ್ಲಾ ಪ

ನಾನೇ ಆ ಬ್ರಹ್ಮನೆಂದುಸುರುವನು ।
ತಾನುದಾರು ಮತ್ತಾರಿಗ್ಹೇಳುವನು ೧

ನಿಸ್ತರಗಾಂಬೋಧಿಯೆನಿಸಿದಾ ।
ವಸ್ತುವಿಗೆ ದೃಶ್ಯವಿವಾದಾ ೨

ಬೆಲ್ಲ ಸವಿದ ಮೂಕನಂತಾಗಿ ।
ನಿಲ್ಲುವವನೇ ಜಗದೊಳು ಯೋಗಿ ೩

ದ್ವೈತಾದ್ವೈತ ಮೀರಿಹ ಖೂನಾ ।
ತಾತ ಮಹಿಪತಿ ಗುರುಜ್ಞಾನಾ ೪

## ಅಂಕಿತ–ತಾತ ಮಹಿಪತಿ

## ೭೫೦

ದಯಾಕರಾ । ಶ್ರೀಕರಾ ।
ಭಯ ಪರಿಹಾರಾ । ಜಗದೋದ್ಧಾರಾ ಪ

ವನಜನಯನ ಪಾವನ ಕೃತಲೀಲಾ ।
ವನ ನಿಧಿ ಶಯನ ಸುವನ ಜಾಲೋಲಾ ।

ವನಜ ಸುಚರಣಾ ವನನರಪಾಲಾ ।
ವನಜ ಭವಾರ್ಚಿತ ವನಶುಭ ಮಾಲಾ ೧

ಹರಿಕೇಶವ ನರಹರಿ ಸರ್ವೇಶಾ ।
ಹರಿಸುಂದರ ಕರಿ ಹರಮುನಿ ಪೋಷಾ ।
ಹರಿಕುಲ ತಿಲಕ ವಿಹರಿಜಿತ ಭಾಸಾ ।
ಹರಿಚರರಿಪು ಸಂಹರ ಜಗದೀಶಾ ೨

ಗಿರಿಧರ ವಾಮನ ಗಿರಿರಿಪು ತಾತಾ ।
ಗಿರಿಧರ ಪರಿಶತ ಗಿರಿವರ ಪ್ರೀತಾ ।
ಗಿರಿಧರ ತನುಭವ ಗುರುವಿಖ್ಯಾತಾ ।
ಗಿರಿಮಾ ವೆಂಕಟ ಗಿರಿಧರ ದಾತಾ ೩

ಅಂಕಿತ–ವೆಂಕಟ ಗಿರಿಧರ (?)

## ೭೫೧

ದೀನ ಜನ ಅಭಿಮಾನವನು ನೀನು ಅನುದಿನದಲಿ ।
ರಕ್ಷಿಸುವೆ ಸಾನುಕೂಲದಿ । ಶ್ರೀ ನಿಧಿಯೆ ಧೀರ ಎಂದು ।
ವೀರ ಹರಿಮಾರ ಸಂಹಾರಸಖ ಕ್ರೂರ ಫಣಿದರ್ಪಹರನೇ ।
ಆನಂದ ನಂದ ವರಕಂದ ಗೋವಿಂದ
ಮುಕುಂದ ಮುಚಕುಂದ ।
ಪ್ರೀಯ ವರದನಾ ಮಾನಸದಿ ಅರಿತು ತವ ಕುರಿತು ।
ಭಕ್ತಿರತನಾಗಿಹ ಅನವರತ ಸುಖದಲಿಡುತಿಹ ।
ಕೃಷ್ಣಾ ಸಲಹು ಒಲವಿಂದ ೧

ಅಂಕಿತ–ಕೃಷ್ಣ

## ೭೫೨

ಕರುಣ ಘನ ಸಿರಿಚರಣ ಶರಣ ಜನರಾಭರಣಾ ।
ಕಿಸಲಯೋಪಮ ಚರಣ ದುರಿತ ಹರಣ ।
ಪರಿಯೇ ಸಂಕಟ ಹರಿಯೇ ಬಾಯೆಂದು ಕರಿಯೇ ।
ಒದಗಿದ್ಯೆ ನರಹರಿಯೇ ದೈತ್ಯರರಿಯೇ ।
ಪರಮ ಸದ್ಗುಣಧಾಮ ಪೂರಿತ ಮನೋಕಾಮ ।
ಯದುಕುಲಾಂಬುಧಿ ಸೋಮಾ ಮೇಘ ಶಾಮಾ ।
ಸುರಮುನಿ ಜನಧೇಯಾ । ಕಮನೀಯತರ ಕಾಯಾ ।
ಶರಧಿವಾಸನೆ ತೋಯಜಾಕ್ಷ ಸಿರಿ ಕೃಷ್ಣರೇಯಾ ।
ಸಲಹು ಒಲವಿಂದಾ ೧

ಅಂಕಿತ–ಕೃಷ್ಣ (?)

## ೭೫೩

ಪಾಹಿಮಾಂ ತೀರ್ಥಧಾಮಾ ।
ಪಾಹಿಮಾಂತ್ರಿಜಗಾದಿ । ಪಾಹಿಮಾಂ ತನುಜಧವ ।
ಹೇಹಿಮರಾಚೂಡ । ದೇಹಿ ಮನೋಭೀಷ್ಮ ।
ಮಹೀಶಾಯಿಸುಖ ಆಕಾಶ । ವಾಹಿನಿ ಧರಾ ।
ಮೋಹನ ಚರಿತ ರಜತಗೇಹ ಸಾಂಬಾ ಪ

ಈಶ ಅಘನಾಶ ಸರ್ವೇಶ ಸುರಕೋಶ ಮುನಿ ।
ತೋಷಗಜಾಸುರ ವಿನಾಶ ಭವಪಾಶ ಹರ ।
ವಾಸವಾದ್ಯನುತ ನಿರ್ದೋಷ ಶ್ರೀ ಭಸಿಶಿತ । ವಿ
ಭೂಷಿತ ವಿನಾಶ ರಾಮೇಶ ಶಿವಶಂಭೋ ೧

ವೀರ ರಣಧೀರ ಗಂಭೀರ ಸಾಕಾರವರ ।
ಪ್ರಾರ ಸಂಹಾರ ಭಯ ಪೂರಿತ ಪುರಾರಿ । ಮೌ

ದಾರ ಚಿರಚಿರಂಡ ಜಾರಿವಿಹಾರಿ । ಶ್ರೀ
ಹೇರಂಬ ತಾತದಯ ಪಾರಾವಾರ ಶಂಭೋ ೨

ನೀಲಕಂಧರ ರುಂಡಮಾಲೆ ಶೋಭಿತ ದುರಿತ ।
ಕಾಲಹರ ಗೋಗಮನ ಭಾಲನಯನಾರ್ತಜನ ।
ಪಾಲ ವಿಶಾಲಾ ತ್ರಿಶೂಲಧೃತನಿರುತ ಶುಭ
ಲೀಲ ಶ್ರೀ ಗುರುಕೃಷ್ಣ ಬಾಲಕ ಪ್ರಭು ಶಂಭೋ ೩

ಅಂಕಿತ–ಶ್ರೀಗುರುಕೃಷ್ಣ

## ೭೫೪

ಬಾರೈ ಭೂಶಿರಿವರ ವೆಂಕಟದೊರೆಯೇ ।
ಕರಿವರದ ಶ್ರೀ ಹರಿಯೇ ।
ದೋರ್ರೈ ಶ್ರೀಕರ ಶುಭಸುರ ಕುಲದೊರೆಯೇ ।
ಪರತರ ನರಹರಿಯೇ ಪ

ಅರುಣಾ ವಾರಿಜಪರಿಚರಣಾ ।
ಚರಣಾ ಶರಣಾಗತ ಕರುಣಾ ।
ಕರುಣಾ ಕೋಟ್ಯರುಣಪತಿಯ ಹಿಮಕಿರಣಾ ।
ಕಿರಣ್ಹೊಳೆವ ಸುವರಣಾ ।
ವರಣಾ ಪೀತಾಂಬರ ಮಂದರೋದ್ದರಣಾ ।
ಧರಣಾಗತ ಕರುಣಾ ।
ಕರುಣಿಸೋ ನಿರುತರ ಕೌಸ್ತುಭಾಭರಣಾ ।
ಮೊರೆ ಹೋಗುವೆನು ಶರಣಾ ೧

ಮಂಗಳ ಮಹಿಮಶಯನ ಭೂಜಂಗಾ ।
ಜಂಗಮಾ ಅಂತರಂಗಾ ।
ರಂಗಾ ಲೀಲಾವಿಗ್ರಹ ತುರಂಗಾ ।
ತುರಂಗ ವಿಹಂಗ ।

ಹಂಗವಿಡಿದಿಹೆನೊ ನಿನ್ನಯ ಶುಭ ಅಂಗಾ ।
ಅಂಗಾ ಜಯಿಸು ಸಂಗಾ ।
ಸಂಗಾರಹಿತ ದೇವತೆಗಳ ಶೃಂಗಾ
ಶೃಂಗಾರ ಭವ ಭಂಗಾ ೨

ಸುಂದರಿಂದಿರಾ ರಮಣಾನಂದಾ ।
ನಂದ ಗೋವೃಂದಾ ।
ವೃಂದಾರ ಕಾದಿಹ ರಕ್ಷಕಚಂದಾ ।
ಚೆಂದದಿ ಆನಂದಾ ।
ನಂದಾ ಸುನಂದ ನಮಿತ ಪದದ್ವಂದ್ವಾ ।
ದ್ವಂದ್ವಾ ಮುಕ್ಕುಂದಾ ।
ಕುಂದರ ವದನಾ ಗುರುಕೃಷ್ಣನ ಕಂದಾ ।
ನೊಡೆಯ ಗೋವಿಂದಾ ೩

ಅಂಕಿತ–ಗುರುಕೃಷ್ಣ

## ೭೫೫

ಭಜೆ ಮುಕುಂದಂ ಗೋವಿದಂ ಪ

ರಾಧಾನಯನ ಚಕೋರ ನಿರಶೇಷಂ ।
ಗಾಧಿ ತನಯ ಸತ್ಕೃತು ಪರಿತೋಷಂ ೧

ಶಂಭರ ಸಂಭವ ಜಿತಶುಭನಯನಂ ।
ಶಂಭರ ನಿಧಿ ಕಮಲಾಯುತ ಶಯನಂ ೨

ಘನ ಶ್ರೀ ಗಿರಿಧರ ಸುತ ಪರಿಪೋಷಂ ।
ಕನಕಲಸತ್ಸೋದಾಮಿನಿ ಚ್ಛೈಲಂ ೩

ಅಂಕಿತ–ಗಿರಿಧರಸುತ

## ೭೫೬

ಶ್ರೀಮಹಾಲಕ್ಷಮಿತಾಯೇ । ಶ್ರೀ ಮಹಾಮಾಯೆ ।
ಹೇಮಾಯಾ ಕರುಣಾಬ್ದಿಯೇ । ಕಾಮಿತ ಫಲನೀಯೇ ।
ಸಾಮಜಗಮನಿಯೇ । ಹೇಮಾಯಾ ಕೋಟಿ ಸಮಕಾಯೇ ।
ಶುಭಚರಿಯ । ಬಹುಪರಿಯೇ । ಹರಿಪ್ರೀಯೇ । ಅರಿಯೇ ಪ

ಶರಧಿಸುತವನೇ । ಸರಸಿಜಸದನೆ ।
ಸುರಚಿರದವರಾನೆ । ಕರಿಸರ್ಪವೇಣೆ ।
ದುರಿತಾದೌಘಪಹರಣೆ । ಕರುಣದಾಗಾರೆ ಶರಣೆ ।
ನೆರೆನಿನ್ನನಂಬಿದೆನೆ ಮಾತೆ । ಅದ್ಭುತೆ ।
ರವಿನಮಿತೆ । ಪ್ರಖ್ಯಾತೆ । ದಾತೆ ೧

ಹೊಳೆವ ಸೌಂದರ್ಯ ಸಲಹೆ । ಸಲೆಕುಲದೈವೆ ।
ಚಲುವ ಸುಜನ ಸೇವೆ । ಮಲಿನರ ಭಾವೆ ।
ಹಲವು ಮಾತೇನು ಫಲವೇ । ಬಲುನಾಹಂಬಲಿಸುವೆ ।
ಒಲಿದು ಕರುಣಿಸು ಭಾಗ್ಯವಂತೆ । ಗುಣವಂತೆ ।
ಬಹುಶಾಂತೆ । ದಯವಂತೆ ಕಾಂತೆ ೨

ಕರವೀರ ಪುರಧೀಶೆ । ಶರಣರುಲ್ಹಾಸೆ ।
ಸುರಮುನಿಜನತೋಷೆ । ಶಿರಸ್ವಪ್ರಕಾಶೆ ।
ಪರತರ ಸುವಿಲಾಸೆ । ಗುರುಕೃಷ್ಣಸುತನೀಶೆ ।
ವರಕೊಲ್ಹಾಸುರನ ವಿನಾಸ । ಜಗದೀಶೆ । ಮೃದುಭಾಷೆ ।
ಅವಿನಾಶೆ । ಈಶೆ ೩

ಅಂಕಿತ–ಗುರುಕೃಷ್ಣಸುತ

## ೭೫೭

ಸ್ಮರಿಸೆಲವೋ ಸ್ಮರಿಸೆಲವೋ ಮನವೇ ।
ನಿರುತದಿ ಗುರುಮಹೀಪತಿ ಪಾದಾ ಪ

ಆದ್ಯಾತ್ಮದಘನ ವಿದ್ಯೆಯ ಸಾಧಿಸಿ ।
ಸಿದ್ಧರ ನಡುವೆ ಪ್ರಸಿದ್ಧರಾದವರ ೧

ನೆಟ್ಟನೆ ಶರಣರ ಪುಟ್ಟಿಸಿರಧಿಕಾ ।
ಬಿಟ್ಟುಪದೇಶವ ಕೊಟ್ಟು ಸಾಕುವರಾ ೨

ಧಾರುಣಿಯೊಳು ಸಂಸಾರ ಮಾಡಿದರ ।
ಸಾರಸಜಲದಂತೆ ರಚಿಸಿದರಾ ೩

ಯೋಗಧಾರುಣದಿ ಸಾಗಿಪದಿನಗಳು ।
ಭಾಗವತಾಗ್ರಣಿ ಎನಿಪಶ್ರೀಗುರುಪಾದಾ ೪

ವಿತ್ತಜನರು ತಂದಿತ್ತರೆ ಹಿಡಿಯದೆ ।
ನಿತ್ಯವ್ಯಯವ ಪವಡಿಸುತಿಹರವರಾ ೫

ಯುಕ್ತದಿ ವಿಷಯಾಸಕ್ತಿಯತ್ಯಜಿಸಿ । ವಿ
ರಕ್ತಿ ಬೆಳಿಸಿ ಸುಮುಕ್ತಿ ಪಡೆದವರಾ ೬

ಸ್ವಸ್ಥದಿ ನಾಲ್ಕು ಅವಸ್ಥೆಯ ಮೀರಿ । ಸ
ಮಸ್ತರಲಿ ನಿಜ ವಸ್ತು ಕಂಡವರಾ ೭

ಕಾಖಂಡಕಿ ಸ್ಥಳ ಶ್ರೀಕರವಂದ್ಯೆ । ನಿ
ರಾಕರಿಸದೆ ಅಂಗೀಕರಿಸಿದರಾ ೮

ಎಂದೆಂದಿಗೂ ಹೊರಗೊಂದಿನ ಹೋಗದೆ ।
ಮಂದಿರದೊಳಗಾನಂದದಲಿಹರಾ ೯

ತಾಪತ್ರಯದಾ ಭವಪರಿಹರಿಸುತ ।
ತಾಪೋರೆದನು ಗುರು ಶ್ರೀಪತಿಗುರುಪಾದಾ ೧೦

ಅಂಕಿತ–ಗುರುಶ್ರೀಪತಿ

## ೭೫೮

ಜಯ ಮಂಗಳಂ ನಿತ್ಯ ಶುಭಮಂಗಳಂ ।
ಪ್ರಿಯಕರಾನಂದ ಶ್ರೀ ತುಲಸಿ ಮಾತೆ ಪ

ದಿನಕರನು ಉದಯಿಸಲಾಕ್ಷಣದಿ ಭಕ್ತರು ನಿನ್ನ ।
ನೆನೆದು ಭಕುತಿಯಲಿ ಜೀವನ ನೀಡುತಾ ।
ಪಣೆಗೆ ಮೃತ್ತಿಗೆ ತೀಡಿ ಪ್ರಣೀತರಾಗುತ ಪ್ರದ
ಕ್ಷಣೆ ಮಾಡಿದವರ ಫಲವೆಣಿಸಲಳವೇ ೧

ಹರಿಯನಾಗ್ರದಿ ತ್ರಿಪುರಹರನು ಮಧ್ಯದಿ ಬ್ರಹ್ಮ ।
ನಿರುವ ಮೂಲದಿನಾಕಚರರು ಮುದದೀ ।
ನಿರುತ ಶಾಖಂಗಳಲಿ ಚರಿಸುತ್ತಲಿಹರೆಂದು ।
ಧರಣಿ ಸುರರರ್ಚಿಪರು ಹರುಷದಿಂದಾ ೨

ಕಾರ್ತಿಕಶುದ್ಧ ಸುಮುಹೂರ್ತ ದ್ವಾದಶಿಯಲ್ಲಿ ।
ಅರ್ತಿಯಿಂದಲಿ ಸುಜನರರ್ತುತ್ವರದೀ ।
ನರ್ತನದಿ ತವನಾಮ ಕೀರ್ತನೆಯ ಪಾಡುತಲಿ ।
ಬೆರ್ತುನಿಂದವರ್ಗೆ ನೀ ಸಾರ್ಥಿ ಎನಿಪೆ ೩

ಕಾಂತೆ ನಿನ್ನ ನುದಿನವನಂತ ಜನ ವಂದಿಸುತ ।
ಅಂತರಂಗದಿ ನಲಿದು ನಿಂತರವರಾ ।
ಚಿಂತೆಪರಿಪರಿಪೆ ಅಳಕಾಂತೆ ದುರಿತಘನಿಚಯ ।
ಕಾಂತಾರ ಪಾವಕ ಸುಸಂತ ವಿನುತೆ ೪

ಅದಿಗಿಂದಿಗೆ ನೀನು ವೃಂದಾವನದಿ ಮಹಿಮೆ ।
ನಿಂದು ತೋರಿದೆ ಯೋಗಿವೃಂದ ವಂದ್ಯೆ ।
ತಂದೆ ಶ್ರೀ ಗಿರಿಧರನ ಕಂದನನುದಿನ ಸಲಹು ।
ಮಂದರೋದ್ಧಾರ ಪ್ರೀಯ ಕುಂದವದನೆ ೫

ಅಂಕಿತ–ಗಿರಿಧರಕಂದ

## ೭೫೯

ಮೊದಲು ನಡು ಕಡಿ ಬರಲು ಲಘುತಾ
ಇದನುಯರತಾ ಗಣಗಳಂದದಿ
ವದಗಿ ಗುರುವಿರಮಧ್ಯವಸಾನದಲಿ ಭಜಸಾ
ಸದರ ಗಣ ತಿಳಿಮೂರು ಗುರುಲಘು
ವದಗಿರಲು ಮನಗಣಗಳಾದವು
ಮುದದಿ ಗಣ ವೆಂಟೆಂದು ಮಹಿಪತಿ ಕಂದಸಾರಿದನು ೧

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಕೀರ್ತನೆಗಳ ಅಕಾರಾದಿ

# ಅನುಬಂಧ-೧

## ಕಠಿಣ ಶಬ್ದಗಳ ಅರ್ಥ

ಅಘ – ಪಾಪ
ಅರ್ತು – ಪ್ರೀತಿ
ಅನಳ – ಬೆಂಕಿ
ಅನಾಹತ – ಪೆಟ್ಟುಬೀಳದ
ಅಪ್ಪು – ನೀರು
ಅರವಿನ – ತಿಳಿವಿನ
ಅರಹು – ಅರಿವು, ಜ್ಞಾನ
ಅಂಗಣ – ಅಂಗಳ
ಇಳೆ – ಭೂಮಿ
ಇಂಬು – ಅನುಕೂಲ
ಈವ – ಕೋಡುವ
ಉಲಿ – ಧ್ವನಿಮಾಡು
ಉಸುರು – ಹೇಳು
ಒಡಮೂಡು – ಹುಟ್ಟು, ಜನಿಸು
ಒಡಲು – ಹೊಟ್ಟೆ, ಗರ್ಭ
ಒಂಭತ್ತುಛಿದ್ರದನಾವೆ–ಶರೀರ
ಕಮಲಾಂಬಕ – ಕಮಲದಂಥ ಕಣ್ಣುಳ್ಳವ
ಕರುಣಾಂಬಕ – ಕರುಣಾದೃಷ್ಟಿ
ಕಂಗಳು – ಕಣ್ಣುಗಳು
ಕಾವ – ಕಾಯುವ
ಕಾಂಬೆನು – ಕಾಣುವೆನು
ಕೀಲು – ರಹಸ್ಯ
ಕುಠಾರ – ಕೊಡಲಿ
ಕುಡುವ – ಕೊಡುವ
ಕಲಿ – ಸೇರು
ಕ್ಲೇಶ – ದುಃಖ, ನೋವು
ಕೊನರು – ಚಿಗುರು
ಕೌತುಕ – ಆಶ್ಚರ್ಯ
ಖರೆ – ಸತ್ಯ
ಖೂನ – ಗುರುತು
ಗದ್ದಿ – (ನೀರುಣಿಸುವ ) ಭೂಮಿ
ಗರುವ – ಗರ್ವ
ಗೇಹ – ಮನೆ
ಛಂದ – ಅಂದ, ಸುಂದರ
ಜರಿ – ನಿಂದಿಸು
ಜೀಮೂತ – ಮೋಡ
ಠವಿಸು – ಹೊಳೆ
ತರಣಿ – ಸೂರ್ಯ
ತರಣೋಪಾಯ– ಉದ್ಧಾರಮಾರ್ಗ
ತಳಿ – ಚಲ್ಲು, ಚಿಮುಕಿಸು
ತೃಷೆ – ನೀರಡಿಕೆ
ತುಡುವಾ – ತೊಡುವಾ
ದಕ್ಕು – ಸಿಗು
ದಂದುಗ – ತೊಂದರೆ, ವ್ಯಥೆ
ದಾವನು – ಯಾವನು
ದಿವಸಾಧಿಪ – ಸೂರ್ಯ
ದ್ರುಮ – ವೃಕ್ಷ, ಗಿಡ
ದೆರಿ – ತೆರೆ
ದೋರಿ – ತೋರಿ
ದೋರ್ಪದು – ತೋರುವುದು

ಧ್ಯಾಸ – ಚಿಂತನೆ, ಮನನ
ನಿಗಟ – ನಿಕಟ, ಸಮೀಪ
ನಿಬ್ಬರ – ನಿತ್ಯ
ನ್ಯೂನ – ತಪ್ಪು, ಕುಂದು
ನೆರೆ – ಸಮೀಪ, ಅಕ್ಕಪಕ್ಕ
ನೌಲ – ನವಿಲು
ಪಡಿ – ಒಂದು ಅಳತೆ, (ಇಲ್ಲಿ ಸಾಕಷ್ಟು, ಅಧಿಕ ಪ್ರಮಾಣದಲ್ಲಿ)
ಪರಸು – ಹರಸು
ಪಿಂತಿನಾ – ಹಿಂದಿನ
ಪುಬ್ಬು – ಹುಬ್ಬು
ಪೂರಿತಾಯಿತು – ಪೂರ್ತಿ, ಪೂರೈಸಿತು
ಬ್ಯಾಸರ – ಬೇಸರ
ಬಿನುಗು – ತುಚ್ಛ
ಬಿರುಸು – ಕಠಿಣ
ಬುಡ – ತಳ, ಕೆಳಭಾಗ
ಬೂಟಿಕೆ – ಆಡಂಬರ
ಬೆರಸು – ಕೂಡಿಸು
ಭರಣಿ – ಕರಡಿಗೆ, ಕರಂಡಕ
ಭುಜಂಗ – ಹಾವು
ಭೇರಿ – ಡಂಗುರ(ಒಂದು ಬಗೆಯ ಚರ್ಮ–ವಾದ್ಯ)
ಮರಹು – ಮರವು
ಮಸ್ತಕ – ತಲೆ
ಮಾತಂಗ – ಆನೆ
ಮ್ಯಾಲ – ಮೇಲೆ
ಮುನ್ನೆಲೆ – ಮೊದಲೆ
ಮುಂಡಿಗೆ – ಒಗಟು, ಸವಾಲು
ಮೂರ್ಜಗ – ಮೂರುಜಗ
ಯಸಳು – ಎಸಳು
ರಿದ್ಧಿ – ವೃದ್ಧಿ
ಲೋಲ್ಯಾಡಿಸು – ಆನಂದಪಡಿಸು
ವದರು – ಕೂಗು
ವಮ್ಮನ – ಒಂದು ಮನ
ಶಿದ್ಧಿ – ಸಿದ್ಧಿ
ಶೀತಾಂಶು – ಚಂದ್ರ
ಸನ್ಮತಿ – ಸದ್ಬುದ್ಧಿ
ಸರಸಿರುಹ – ತಾವರೆ, ಕಮಲ
ಸರಿತೆ – ನದಿ, ಹೊಳೆ
ಸಂಭಾಳಿಸು – ಸಮಾಧಾನ ಪಡಿಸು
ಸಾಜ – ಸಹಜ
ಸಾದರ – ಆದರಪೂರ್ವಕ
ಸಾರ – ತಿರುಳು
ಸಾಯಸ – ತೊಂದರೆ, ಬಳಲಿಕೆ
ಸಾಯಾಸ – ಆಯಾಸ
ಸಿರ – ತಲೆ
ಸಿಂಬಿ – ಪಾತ್ರೆಗಳ ತಳಕ್ಕೆ ಡುವ ಅಧಾರ(ಸುರುಳಿ)
ಸುರತರು – ಕಲ್ಪವೃಕ್ಷ
ಸುರನದಿ – ಗಂಗಾನದಿ
ಸುರಭಿ – ಕಾಮಧೇನು
ಸುಳುಹು – ಕುರುಹು
ಹಮ್ಮು – ಅಹಂಕಾರ
ಹವಣ – ಉಪಾಯ
ಹಳಿ – ನಿಂದಿಸು
ಹ್ಯಾವ – ಅಹಂ
ಹೀಂಗೆ – ಹೀಗೆ
ಹೃತ್ಪಂಕಜ – ಹೃದಯ ಕಮಲ
ಹೊಯ್ಯು – ಹೊಡೆ
ಕ್ಷುಧೆ – ಹಸಿವು

# ಅನುಬಂಧ–೨

## ಕೀರ್ತನೆಗಳ ಅಕಾರಾದಿ

| ಕ್ರಮ. ಸಂಖ್ಯೆ | ಕೀರ್ತನೆಯ ಪ್ರಾರಂಭದ ಸಾಲು | ಕೀರ್ತನೆಯ ಸಂಖ್ಯೆ |
|---|---|---|
| ೧೬೮. | ನಿರ್ತದೊಡ್ಡದ್ಯೆಯ್ಯಾ | ೬೧೪ |
| ೧೬೯. | ನಿಧಾನವೆ ಕೇಳಿ ಸಜ್ಜನವೇ | ೬೧೫ |
| ೧೭೦. | ನಿನಗ್ಯಾಕೋ ಜನರಂಜನೆ ಘಣಾ ಭಂಜನೆ | ೬೧೭ |
| ೧೭೧. | ನಿನಗಿದು ಹಿತವೇ ಇದು ಹಿತವೇ | ೬೧೬ |
| ೧೭೨. | ನಿನ್ನ ನೀ ತಿಳಿದು ನೋಡು ಯನ್ನ ಮನವೇ | ೬೧೯ |
| ೧೭೩. | ನಿನ್ನ ನೀ ತಿಳಿದು ನೋಡೋ ಕೇಳೆಲೋ ಪ್ರಾಣಿ | ೬೧೮ |
| ೧೭೪. | ನಿನ್ನವಗುಣ ಜರಿದು ಎನ್ನ ಮನವೇ | ೬೨೦ |
| ೧೭೫. | ನಿನ್ನ ಸ್ವಹಿತಮಾಡೋ ಪ್ರಾಣಿ | ೬೨೧ |
| ೧೭೬. | ನಿನೇ ನಿನ್ನ ಮರೆದಿಹುದೇನು ಮನವೇ | ೬೨೨ |
| ೧೭೭. | ನೀ ಯಾಕ ಮನವೇ ಚಿಂತಿಸಿ ಬಳಲುವೆ ಬರಿದೇ | ೬೨೩ |
| ೧೭೮. | ನೀವು ಬರಿದೆ ಸಾಯಸ ಬಡ ಬ್ಯಾಡಿ | ೬೨೪ |
| ೧೭೯. | ನೆನಿ ಮನವೇ ಪಾವನ ದೇವನ ಚರಿತ ಕಥನುವೇ | ೬೨೫ |
| ೧೮೦. | ನೆನಿ ವನಜನಾಭನ ಮನವೇ | ೬೨೬ |
| ೧೮೧. | ನೆನೆದು ಸುಖಿಸಿ ನಮ್ಮ ಆದಿ ಶರಣರಾ | ೪೨೭ |
| ೧೮೨. | ನೆರೆ ಮಾಡುವೆ ನಮ್ಮೈಯ್ಯಾ ಸಾಧುರಾ | ೪೭೬ |
| ೧೮೩. | ನೆಲಿಗೆ ಬಾರದು ಗುರುವೇ ಮನವಿದು | ೬೨೭ |
| ೧೮೪. | ನೋಡಿ ನೋಡಿ ನಿಮ್ಮೊಳು | ೬೨೮ |
| ೧೮೫. | ನೋಡಿರ್ಯೆ ಜನಾರಂಜನೆಯಲ್ಲಿ ನೋಡಿರ್ಯೆ | ೬೨೯ |
| ೧೮೬. | ನೋಡು ನೋಡು ನಿನ್ನ ಹಿತವಾ | ೬೩೦ |
| ೧೮೭. | ನೋಡು ಗರ್ವ ಹಿಡಿಯ ಬ್ಯಾಡಾ | ೬೩೧ |
| ೧೮೮. | ನೋಡೋ ನೋಡೋ ನಿನ್ನೊಳು ನಿಜಾ | ೬೩೨ |
| ೧೮೯. | ನೋಡು ಮನವೇ ವರ ಯತಿಯಾ ನಡೆ | ೪೭೭ |
| ೧೯೦. | ನಂಬಿಗಿಲ್ಲಾ ಈ ಮನಸಿನ | ೬೩೩ |
| ೧೯೧. | ನಂಬಿ ಗುರುರಾಯ ನಂಘ್ರಿಯಾ ಸಲಹುತಾನೆ | ೪೭೮ |
| ೧೯೨. | ನಂಬಿ ನಡಿಯಿರೋ ನಂಬಿ ನಡಿಯಿರೋ | ೫೧೩ |
| ೧೯೩. | ನಂಬಿರೋ ಮನವನುದಿನಾ | ೬೩೪ |
| ೧೯೪. | ನಿಂತು ಪುಗಡಿ ಹಾಕ ಭ್ರಾಂತ ತನವ್ಯಾಕ | ೭೩೩ |
| ೧೯೫. | ಪಾದುಕವೆ ಗುರು ಪಾದುಕವೇ | ೪೭೯ |
| ೧೯೬. | ಪಾಲಿಸೋ ಶ್ರೀಗುರುವೇ ಯನ್ನ ನೀ | ೪೮೦ |

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ ಜೆ.ಸಿ. ರಸ್ತೆ
ಬೆಂಗಳೂರು